# ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಸರ್ ಮಿರ್ಜಾ ಎಂ ಇಸ್ಮಾಯಿಲ್

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ ಎಂ.ಫಿಲ್.ಪದವಿಗಾಗಿ ಸಾದರಪಡಿಸಿದ ನಿಬಂಧ)

ಸಂಶೋಧಕರು
ತಿಪ್ಪಣ್ಣ

ಮಾರ್ಗದರ್ಶಕರು
ಡಾ.ಕೆ.ಮೋಹನ್‌ಕೃಷ್ಣ ರೈ
ಸಹ ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೩

# ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಸರ್ ಮಿರ್ಜಾ ಎಂ ಇಸ್ಮಾಯಿಲ್

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಚರಿತ್ರೆ ವಿಭಾಗಕ್ಕೆ ಎಂ.ಫಿಲ್.ಪದವಿಗಾಗಿ ಸಾದರಪಡಿಸಿದ ನಿಬಂಧ)


ಸಂಶೋಧಕರು

ತಿಪ್ಪಣ್ಣ

ಮಾರ್ಗದರ್ಶಕರು

ಡಾ.ಕೆ.ಮೋಹನ್‌ಕೃಷ್ಣ ರೈ

ಸಹಪ್ರಾಧ್ಯಾಪಕರು






ಚರಿತ್ರೆ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೨

## ದೃಢೀಕರಣ ಪತ್ರ

ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಸರ್ ಮಿರ್ಜಾ ಎಂ ಇಸ್ಮಾಯಿಲ್ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ತಿಪ್ಪಣ್ಣ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ.ಕೆ. ಮೋಹನ್‌ಕೃಷ್ಣ ರೈ
ಮಾರ್ಗದರ್ಶಕರು ಹಾಗೂ ಸಹ ಪ್ರಾಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 23/07/012

## ಪ್ರಮಾಣ ಪತ್ರ

ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಸರ್ ಮಿರ್ಜಾ ಎಂ ಇಸ್ಮಾಯಿಲ್ ಎಂಬ ನಿಬಂಧವನ್ನು ಡಾ.ಕೆ.ಮೋಹನ್‌ಕೃಷ್ಣ ರೈ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್.ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ತಿಪ್ಪಣ್ಣ
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 23-7-2012

## ಪ್ರಮಾಣ ಪತ್ರ

ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಸರ್ ಮಿರ್ಜಾ ಎಂ ಇಸ್ಮಾಯಿಲ್ ಎಂಬ ನಿಬಂಧವನ್ನು ಡಾ.ಕೆ.ಮೋಹನ್‌ಕೃಷ್ಣ ರೈ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್.ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ತಿಪ್ಪಣ್ಣ
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 23-7-2012

# ಪರಿವಿಡಿ

# ಅಧ್ಯಾಯ ೧

# ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯದ ವ್ಯಾಪ್ತಿ

೧.೩. ಅಧ್ಯಯನ ವಿಧಾನ

೧.೪. ಅಧ್ಯಯನದ ಸ್ವರೂಪ

## ಅಧ್ಯಾಯ ಒಂದು

# ಪ್ರಸ್ತಾವನೆ

ಭಾರತ ದೇಶದಲ್ಲಿಯೇ ಹೈದರಾಬಾದ್ ಸಂಸ್ಥಾನವು ಅತಿ ದೊಡ್ಡ ಸಂಸ್ಥಾನವಾಗಿತ್ತು. ಸಂಸ್ಥಾನವು ಸುಮಾರು ೮೨,೦೦೦ ಚದರ ಮೈಲಿಯಷ್ಟು ವಿಸ್ತಾರವಾಗಿತ್ತು. ಸಂಸ್ಥಾನದ ಒಟ್ಟು ಜನಸಂಖ್ಯೆ ೧ ಕೋಟಿ ೬೦ ಲಕ್ಷದಷ್ಟಿತ್ತು. ಹೈದರಾಬಾದ್ ಸಂಸ್ಥಾನದ ಸ್ಥಾಪಕ ಮೀರ್ ಕಮುರುದ್ದೀನ್ ಬಿನ್ ಕಿಲೀಚಖಾನ್. ಇವನ ತಂದೆ ಗಾಜಿಯೋದ್ದೀನ್ ಖಾನ್ ಮೊಗಲ ಚಕ್ರವರ್ತಿ ಔರಂಗಜೇಬನ ಸೇನಾಧಿಪತಿಯಾಗಿದ್ದನು. ಔರಂಗಜೇಬನ ಮರಣಾನಂತರ ಆರು ವರ್ಷಗಳ ತರುವಾಯ ಅಂದರೆ ಕ್ರಿ.ಶ.೧೭೧೩ರಲ್ಲಿ ಮೊಗಲರ ಸಾಮ್ರಾಟ ಫರೂಕಶಯರ್ ಕಮುರುದ್ದೀನ್‌ನನ್ನು ದಕ್ಷಿಣದ ಸುಬೇದಾರನನ್ನಾಗಿ ನೇಮಕ ಮಾಡಿದನು. ನಿಜಾಮ ಉಲ್ ಮುಲ್ಕ್ ಫಿರೋಜ್ ಜಂಗ್ ಎಂಬ ಬಿರುದಿನೊಂದಿಗೆ ಮೀರ್ ಕಮುರುದ್ದೀನ್ ದಕ್ಷಿಣದಲ್ಲಿ ತನ್ನ ರಾಜ್ಯಭಾರವನ್ನು ಪ್ರಾರಂಭಿಸಿದನು. ತದನಂತರ ಸಾಮ್ರಾಟ ಮಹಮ್ಮದಶಾಹ ಈತನಿಗೆ ಆಸಫ್‌ಜಹಾ ಎಂಬ ಬಿರುದನ್ನು ಸೇರಿಸಿದ್ದರಿಂದ ನಿಜಾಮರು ಆಸಫ್‌ಜಾಹಾ ಮನೆತನದವರೆಂದು ಗುರುತಿಸಲ್ಪಟ್ಟರು. ಕ್ರಿ.ಶ.೧೭೨೪ರಲ್ಲಿ ಮೀರ್ ಕಮುರುದ್ದೀನ್ ಮೊಗಲರ ನಿಯಂತ್ರಣದಿಂದ ಮುಕ್ತನಾಗಿ ತಾನು ಸ್ವತಂತ್ರ ಅರಸನೆಂದು ಘೋಷಿಸಿಕೊಂಡನು. ಮೀರ್ ಕಮುರುದ್ದೀನನ ತರುವಾಯ ಬಂದ ನಿಜಾಮರೆಲ್ಲರೂ ಮೊಗಲ ಅರಸರಿಗೆ ನಾಮಮಾತ್ರ ಮಾಂಡಲಿಕರಾಗಿದ್ದು, ಆಮೇಲೆ ೧೮೫೭ರ ಸ್ವಾತಂತ್ರ್ಯ ಸಂಗ್ರಾಮದ ನಂತರ ಸಂಪೂರ್ಣವಾಗಿ ಬ್ರಿಟಿಶರ ಅಧೀನಕ್ಕೆ ಬಂದು ಅವರ ಆದೇಶದಂತೆ ರಾಜ್ಯಭಾರವನ್ನು ಮುಂದುವರಿಸಿದರು.

ನಿಜಾಮರು ಸ್ವತಂತ್ರ ಅಧಿಕಾರವನ್ನು ಘೋಷಿಸಿಕೊಳ್ಳುವ ಒಂದೇ ಒಂದು ಅವಕಾಶವನ್ನೂ ಬಿಡುತ್ತಿರಲಿಲ್ಲ. ಇವರು ಪ್ರಾರಂಭದಿಂದಲೂ ತಮಗೆ ದೈವದತ್ತ ಅರಸೊತ್ತಿಗೆ ಅಧಿಕಾರವಿದೆ ಎಂದು ನಂಬಿದ್ದರು. ರಾಜಕೀಯ ಸಿದ್ಧಾಂತದಲ್ಲಿ ನಿಜಾಮರು ಸ್ಟೂವರ್ಟ್ ಲೂಯಿಸ್ ಮತ್ತು ಕೈಸರ್ ಅರಸರನ್ನು ಮೀರಿಸಿದ್ದರು. ವಿಸ್ತರಣಾವಾದಿಗಳು ಯುದ್ಧ ನಿಪುಣರಾದ ಪೇಶ್ವೆಗಳ ಅಧೀನದಲ್ಲಿದ್ದ ಮರಾಠರ ಹಾಗೂ

ಮೈಸೂರಿನ ಹೈದರ್ ಅಲಿ ಮತ್ತು ಟಿಪ್ಪು ಸುಲ್ತಾನರ ಏಳ್ಗೆ ಬ್ರಿಟಿಶರಿಗೂ ಮತ್ತು ನಿಜಾಮರಿಗೂ ಶಾಂತಿಯಿಂದಿರಲು ಬಿಡಲಿಲ್ಲ. ೧೮೭೮ರಲ್ಲಿ ನಿಜಾಮನು ರಕ್ಷಣೆಗಾಗಿ ಸಹಾಯಕ ಸೈನ್ಯಪದ್ಧತಿ ಒಪ್ಪಂದಕ್ಕೆ ಸಹಿ ಹಾಕಿದನು.

ಇದಕ್ಕೆ ಪ್ರತಿಯಾಗಿ ಸರ್ಕಾರವು ನಿಜಾಮನಿಗೆ ಅನೇಕ ಸವಲತ್ತುಗಳನ್ನು ಮತ್ತು ಆಂತರಿಕ ಅಧಿಕಾರವನ್ನು ನೀಡಿತು. ನಿಜಾಮನು ಸ್ವತಂತ್ರವಾದ ಧ್ವಜ, ರಾಷ್ಟ್ರಗೀತೆ, ಸೈನ್ಯ, ನಾಣ್ಯ, ಸಾರಿಗೆ, ರೈಲ್ವೆ, ಅಂಚೆ, ಆಕಾಶವಾಣಿ ಮತ್ತು ಶಿಕ್ಷಣ ವ್ಯವಸ್ಥೆಯನ್ನು ಹೊಂದಿದ್ದನು. ಬದುಕಿನಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಸಂಪತ್ತು ಮತ್ತು ಅಧಿಕಾರವನ್ನೇ ಬಯಸುತ್ತಿದ್ದ ಮೀರ್ ಉಸ್ಮಾನ್ ಆಲಿಖಾನ್ ಬಹದ್ದೂರ್ ಆಗಸ್ಟ್ ೨೯, ೧೯೧೧ರಂದು ಅಧಿಕಾರಕ್ಕೆ ಬಂದನು. ೧೯೩೭ರಿಂದ ೧೯೪೮ರವರೆಗೆ ಇವನ ಆಸ್ಥಾನದಲ್ಲಿ ದಿವಾನರಾಗಿ ಸೇವೆ ಸಲ್ಲಿಸಿದವರು ಅಕ್ಬರ್ ಹೈದರಿ, ಸರ್ ಮಿರ್ಜಾ ಎಂ ಇಸ್ಮಾಯಿಲ್, ಚಟ್ಕಾರಿಯ ನವಾಬ ಹಾಗೂ ಮೀರ್ ರಿಯಾಜ್ ಅಲಿ. ಈ ದಿವಾನರಲ್ಲಿ ಸರ್ ಮಿರ್ಜಾ ಎಂ ಇಸ್ಮಾಯಿಲ್‌ರು ನಿಜಾಮರ ಕೋರಿಕೆಯಂತೆ ಹೈದರಾಬಾದಿನ ದಿವಾನರಾಗಿ ಆಗಸ್ಟ್ ೧೯೪೭ರಲ್ಲಿ ಅಧಿಕಾರ ಸ್ವೀಕರಿಸಿದರು. ಆಗ ಹೈದರಾಬಾದಿನ ವಿಸ್ತೀರ್ಣ ಜನಬಾಹುಳ್ಯ ಮತ್ತು ಆದಾಯದಲ್ಲಿ ಇತರ ಎಲ್ಲಾ ದೇಶೀಯ ಸಂಸ್ಥಾನಗಳಿಗಿಂತ ದೊಡ್ಡದಾಗಿತ್ತು. ಸರ್ ಮಿರ್ಜಾ ಅವರು ಮೈಸೂರಿನಲ್ಲಿ ದಿವಾನರಾಗಿದ್ದಾಗಲೆ ಹೈದರಾಬಾದಿನ ದಿವಾನರಾಗಲು ನಿಜಾಮರಿಂದ ಎರಡಾವರ್ತಿ ಕರೆ ಬಂದಿತ್ತು.

ಮಿರ್ಜಾ ಎಂ ಇಸ್ಮಾಯಿಲ್‌ರು ಆಗಸ್ಟ್ ೧೯೪೭ಕ್ಕೆ ಹೈದರಾಬಾದಿಗೆ ಬಂದು ಅಧಿಕಾರ ವಹಿಸಿ ಕೊಂಡರು. ಅವರು ಹೈದರಾಬಾದಿನ ದಿವಾನ್ ಆದರೆಂಬ ಸುದ್ದಿ ತಿಳಿಯುತ್ತಲೇ ಗಾಂಧೀಜಿ, ಜಫರುಲ್ಲಾ ಖಾನ್, ಎ.ರಾಮಸ್ವಾಮಿ ಮೊದಲಿಯಾರ್ ಮೊದಲಾದ ಅನೇಕ ಗಣ್ಯರು ಶುಭ ಸಂದೇಶವನ್ನು ಕಳುಹಿಸಿಕೊಟ್ಟರು. ಮಿರ್ಜಾ ಅಧಿಕಾರ ವಹಿಸಿಕೊಂಡ ಕೆಲವೇ ದಿನಗಳಲ್ಲಿ ಆಕಾಶವಾಣಿಯಿಂದ ಹೈದರಾಬಾದಿನ ಜನರಿಗೆ ಪ್ರಸಾರ ಭಾಷಣ ಮಾಡಿದರು. ''ಹೈದರಾಬಾದು ದೊಡ್ಡ ನಗರ, ನಿರಂತರ ಭಿನ್ನತೆಯ ಮಡಿಲಲ್ಲೇ ಮುಳುಗಿರುವ ಈ ದೇಶವು ಪೌರ್ವಾತ್ಯ ಸಂಸ್ಕೃತಿ, ನಾಗರಿಕತೆ ಮತ್ತು ಒಂದಾಗಿ ಕಲೆಯುವ ಸೌಹಾರ್ದದ ಬೀಡಾಗಬಲ್ಲದು. ಈ ಭವ್ಯ ನಗರವು ಭವಿಷ್ಯದ ಭಾರತದ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸಬಹುದಾದ ಗುಣಗಳನ್ನು ಹೊಂದಿದೆ. ಆದರೆ ಮಂತ್ರದಿಂದ ಮಾವಿನಕಾಯಿ ಉದುರದು. ಶ್ರಮ ಬಹಳ ಬೇಕು. ಹೈದರಾಬಾದಿನವರು ಇದುವರೆಗೂ ಮಾಡದೆ ಇದ್ದಂತಹ ಅಪಾರ ಪ್ರಯತ್ನ ಮಾಡಬೇಕು. ಯಾವ ಸಿದ್ಧಿಯನ್ನು ಗಳಿಸಬೇಕಾದರೂ ನಮ್ಮ ಸ್ವಂತ ಬದುಕು ಸ್ವಚ್ಛವಾಗಬೇಕು. ಪಕ್ಷಗಳ ಒಳಜಗಳ ನಿಲ್ಲಬೇಕು.''

ಮಿರ್ಜಾ ಎಂ ಇಸ್ಮಾಯಿಲ್‌ರು ಆಡಳಿತದಲ್ಲಿ ಹೆಚ್ಚು ಜನ ಭಾಗವಹಿಸಲು ಸಹಾಯ ಹಾಗೂ ಪ್ರೋತ್ಸಾಹ ನೀಡಿದರು. ವಾರದಲ್ಲಿ ಎರಡು ಹಗಲು ಸಾರ್ವಜನಿಕರ ಭೇಟಿಗಾಗಿ ಮೀಸಲಿಟ್ಟರು. ದಿನಕ್ಕೆ

ಇನ್ನೂರು ಮುನ್ನೂರು ಜನಸಾಮಾನ್ಯರು ದಿವಾನರನ್ನು ಕಂಡು ತಮ್ಮ ಕಷ್ಟಸಂಕಷ್ಟಗಳನ್ನು ತೋಡಿಕೊಂಡು ಅರ್ಜಿ ಅಹವಾಲು ಕೊಡುತ್ತಿದ್ದರು. ರಾಜ್ಯದ ಅತ್ಯುನ್ನತ ಅಧಿಕಾರಿಯಾದ ದಿವಾನರನ್ನು ಭೇಟಿಯಾಗಲು ಅವಕಾಶ ದೊರೆಯಿತಲ್ಲ ಎನ್ನುವುದೇ ಅವರಿಗೆ ದೊಡ್ಡ ಸಮಾಧಾನವಾಗಿತ್ತು. ಏಕೆಂದರೆ ಇವರ ಅವಧಿಗಿಂತ ಮೊದಲು ದಿವಾನರನ್ನು ನೋಡುವುದು ಅಸಾಧ್ಯವಾಗಿತ್ತು.

ಮಿರ್ಜಾ ಎಂ ಇಸ್ಮಾಯಿಲ್‌ರು ತಾವು ಇದ್ದ ಅಲ್ಪ ಅವಧಿಯಲ್ಲೇ ಹೈದರಾಬಾದಿಗೆ ಇದ್ದ ಕೊರತೆಯನ್ನು ನಿವಾರಿಸಲು ಬಹಳ ಪ್ರಯತ್ನಿಸಿದ್ದರು. ಆದರೆ ಇದು ಕೆಲವರ ಅಸೂಯೆಗೂ ಕಾರಣವಾಯಿತು. ನಿಜಾಮರಲ್ಲಿ ಮಿರ್ಜಾ ಎಂ ಇಸ್ಮಾಯಿಲ್‌ರ ಬಗ್ಗೆ ಇಲ್ಲಸಲ್ಲದನ್ನು ಹೇಳಿ ನಿಜಾಮರು ನಂಬುವಂತೆ ಮಾಡಿದರು. ಈ ಸಂಚಿನಲ್ಲಿ ರಜಾಕಾರರು ಮತ್ತು ಕಾಸಿಂ ರಜ್ವಿ ಹಾಗೂ ಇನ್ನಿತರ ಮುಸ್ಲಿಮರು ಒಳಗೊಂಡಿದ್ದರು. ಇವರು ಮಿರ್ಜಾರಿಗೆ ಆಡಳಿತದಲ್ಲಿ ಸಹಕಾರ ನೀಡದೆ ಇವರ ವಿರುದ್ಧ ಬಂಡೆದ್ದರು. ಇದರಿಂದ ಮನನೊಂದ ಮಿರ್ಜಾ ಎಂ ಇಸ್ಮಾಯಿಲ್‌ರು ಕೊನೆಗೂ ರಾಜಿನಾಮೆಯನ್ನು ನೀಡುವ ನಿರ್ಧಾರಕ್ಕೆ ಬಂದರು.

## ೧.೧. ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನದಲ್ಲಿ ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಮಿರ್ಜಾ ಎಂ ಇಸ್ಮಾಯಿಲ್ ಗುರುತಿಸಿಕೊಂಡ ಬಗೆಯನ್ನು ಸಂಶೋಧನೆ ಮಾಡುವ ಉದ್ದೇಶವನ್ನು ಹೊಂದಲಾಗಿದೆ. ಹೈದರಾಬಾದ್ ಸಂಸ್ಥಾನದಲ್ಲಿ ಮಿರ್ಜಾ ಎಂ ಇಸ್ಮಾಯಿಲ್‌ರು ದಿವಾನರಾಗಿ ಮಾಡಿದ ಸಾಧನೆಗಳನ್ನು ಹಾಗೂ ನಿಜಾಮ ಮತ್ತು ರಜಾಕಾರರ ಜೊತೆಗಿನ ಸಂಬಂಧ ಹಾಗೂ ವಿರೋಧಿಗಳಿಂದ ಎದುರಿಸಿದ ಪ್ರಸಂಗವನ್ನು ಇಲ್ಲಿ ವಿವರಿಸಲಾಗಿದೆ. ಮಿರ್ಜಾ ಎಂ ಇಸ್ಮಾಯಿಲ್‌ರು ಹೈದರಾಬಾದ್ ಸಂಸ್ಥಾನವನ್ನು ಅಭಿವೃದ್ಧಿ ಮಾಡಲು ಕೈಗೊಂಡ ಕ್ರಮಗಳು ಹಾಗೂ ಹಿಂದೂ-ಮುಸ್ಲಿಮರ ಮಧ್ಯೆ ಉತ್ತಮ ಬಾಂಧವ್ಯ ಮೂಡಿಸಲು ಕೈಗೊಂಡ ಕ್ರಮಗಳ ಬಗ್ಗೆ ವಿವರಿಸುವ ಉದ್ದೇಶವನ್ನು ಪ್ರಸ್ತುತ ನಿಬಂಧವು ಹೊಂದಿದೆ.

ಮಿರ್ಜಾ ಎಂ ಇಸ್ಮಾಯಿಲ್‌ರು ದಿವಾನರಾಗಿ ನೇಮಕವಾದ ಮೇಲೆ ಹೈದರಾಬಾದ್ ಸಂಸ್ಥಾನದ ಅಭಿವೃದ್ಧಿಯನ್ನು ಮೈಸೂರು ಸಂಸ್ಥಾನದ ಮಾದರಿಯಲ್ಲಿ ಮಾಡುವ ಅಭಿಲಾಷೆ ಹೊಂದಿದ್ದರು. ಆದರೆ ವಿರೋಧಿಗಳು ಇದಕ್ಕೆ ಅವಕಾಶವನ್ನು ಕೊಡದೆ ಇಲ್ಲಸಲ್ಲದ ಮಾತು ಹೇಳಿ ನಿಜಾಮರ ಹಾಗೂ ಮಿರ್ಜಾ ಎಂ ಇಸ್ಮಾಯಿಲ್‌ರ ಸಂಬಂಧ ಹದಗೆಡುವಂತೆ ಮಾಡಿದರು. ಇದರಿಂದ ಮನನೊಂದ ಮಿರ್ಜಾ ಎಂ ಇಸ್ಮಾಯಿಲ್‌ರು ದಿವಾನ್ ಹುದ್ದೆಗೆ ರಾಜಿನಾಮೆ ನೀಡಿ ಬೆಂಗಳೂರಿಗೆ ವಾಪಸಾದರು. ಆದರೂ ಮಿರ್ಜಾ ಎಂ ಇಸ್ಮಾಯಿಲ್‌ರಿಗೆ ಹೈದರಾಬಾದ್ ಸಂಸ್ಥಾನದ ನಿಜಾಮರ ಮೇಲಿನ ಪ್ರೀತಿ ಕಡಿಮೆಯಾಗಿರಲಿಲ್ಲ. ಈ ವಿಷಯದ ಕುರಿತಾಗಿಯೂ ನಿಬಂಧದಲ್ಲಿ ಚರ್ಚಿಸಲಾಗಿದೆ.

## ೧.೨. ಅಧ್ಯಯದ ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಮಿರ್ಜಾ ಎಂ ಇಸ್ಮಾಯಿಲ್ ಮಾಡಿದ ಸಾಧನೆಗಳ ಕುರಿತು ವಿಶ್ಲೇಷಣೆ ಮಾಡುವ ಉದ್ದೇಶ ಹೊಂದಿದೆ. ಮಿರ್ಜಾ ಎಂ ಇಸ್ಮಾಯಿಲ್‌ರು ಹೈದರಾಬಾದ್ ಸಂಸ್ಥಾನದಲ್ಲಿ ಮಾಡಿದ ಅಭಿವೃದ್ಧಿ ಕಾರ್ಯಗಳು, ನಿಜಾಮನ ಜೊತೆಗಿನ ಸಂಬಂಧ ಹಾಗೆಯೇ ರಾಷ್ಟ್ರನಾಯಕರೊಂದಿಗಿನ ಸಂಬಂಧ ಮತ್ತು ಮಿರ್ಜಾ ಎಂ ಇಸ್ಮಾಯಿಲ್‌ರು ರಾಜೀನಾಮೆ ನೀಡಿದ ಪ್ರಸಂಗಗಳು ಈ ನಿಬಂಧದ ವ್ಯಾಪ್ತಿಗೆ ಬರುತ್ತವೆ.

ಹೈದರಾಬಾದ್ ಸಂಸ್ಥಾನವು ಮೊಗಲರಿಂದ ಸ್ವತಂತ್ರವಾಗಿ ಆಳ್ವಿಕೆ ಮಾಡುತ್ತ ಒಟ್ಟು ಏಳು ಜನ ನಿಜಾಮರ ಆಳ್ವಿಕೆಗೆ ಒಳಪಟ್ಟಿತ್ತು. ಕೊನೆಯ ನಿಜಾಮ ಮೀರ್ ಉಸ್ಮಾನ್ ಆಲೀಖಾನ್‌ನ ಆಳ್ವಿಕೆಯಲ್ಲಿ ನಾಲ್ಕು ಜನ ದಿವಾನರಾಗಿ ಆಳ್ವಿಕೆ ಮಾಡಿದರು. ಅವರಲ್ಲಿ ಮಿರ್ಜಾ ಎಂ ಇಸ್ಮಾಯಿಲ್ ಕೂಡ ಒಬ್ಬರು.

ಸರ್ ಮಿರ್ಜಾ ಎಂ ಇಸ್ಮಾಯಿಲ್ ಅವರು ನಿಜಾಮರ ಕೋರಿಕೆಯಂತೆ ಹೈದರಾಬಾದಿನ ದಿವಾನರಾಗಿ ಆಗಸ್ಟ್ ೧೯೪೬ರಿಂದ ೧೯೪೭ರ ವರೆಗೆ ಒಟ್ಟು ೧೧ ತಿಂಗಳ ಕಾಲ ಕಾರ್ಯಭಾರ ಮಾಡಿದರು. ಹೈದಾರಾಬಾದ್ ಸಂಸ್ಥಾನದಲ್ಲಿ ಹೊಸ ಹೊಸ ಯೋಜನೆಗಳನ್ನು ತರುವಲ್ಲಿ ಯಶಸ್ವಿಯಾದರು.

## ೧.೩. ಅಧ್ಯಯನ ವಿಧಾನ

ಪ್ರಸ್ತುತ ಅಧ್ಯಯನಕ್ಕೆ ಎಲ್ಲ ಬಗೆಯ ಪ್ರಾಥಮಿಕ, ಆನುಷಂಗಿಕ ಹಾಗೂ ಇತರೆ ಆಕರ ಸಾಮಗ್ರಿಗಳನ್ನು ಬಳಸಲಾಗಿದೆ. ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಮಿರ್ಜಾ ಎಂ ಇಸ್ಮಾಯಿಲ್ ಮಾಡಿದ ಸಾಧನೆಗಳನ್ನು ಕುರಿತು ಬಂದಿರುವ ಕೃತಿಗಳು ಹಾಗೂ ಲೇಖನಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಅವುಗಳಲ್ಲಿ ಪ್ರಮುಖ ವಾದವುಗಳೆಂದರೆ, "ಮಿರ್ಜಾ ಎಂ ಇಸ್ಮಾಯಿಲ್ ಅವರ ಜೀವನ ಚರಿತ್ರೆ", "ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು", "ಮಿಥಿಕ್ ಸೊಸೈಟಿಯ ಜರ್ನಲ್ಸ್‌ಗಳು", "ಗುಲಬರ್ಗಾ ಜಿಲ್ಲಾ ದರ್ಶನ" ಮುಂತಾದವು. ಇವುಗಳಿಂದ ಸಂಗ್ರಹಿಸಿದ ಮಾಹಿತಿಗಳನ್ನು ವಿಷಯಾನುಸಾರ ಜೊಡಿಸಿ ವಿಶ್ಲೇಷಿಸಲಾಗಿದೆ. ಅಧ್ಯಯನವು ವ್ಯಕ್ತಿನಿಷ್ಠತೆಯ ಕಡೆಗೆ ಸಾಗದಂತೆ ಎಚ್ಚರಿಕೆ ವಹಿಸಲಾಗಿದೆ.

## ೧.೪. ಅಧ್ಯಯನದ ಸ್ವರೂಪ

ಪ್ರಸ್ತುತ ಪ್ರಬಂಧವನ್ನು ಅಧ್ಯಯನದ ದೃಷ್ಟಿಯಿಂದ ಎಂಟು ಅಧ್ಯಾಯಗಳನ್ನಾಗಿ ವಿಭಾಗಿಸಲಾಗಿದೆ.

ಒಂದನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಸ್ವರೂಪದ ಕುರಿತು ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಹೈದರಾಬಾದ್ ಮತ್ತು ಹೈದರಾಬಾದ್ ಸಂಸ್ಥಾನಕ್ಕೆ ಸೇರಿದ ಪ್ರದೇಶಗಳ ಚಾರಿತ್ರಿಕ ಹಿನ್ನೆಲೆಯನ್ನು ಅಧ್ಯಯನ ಮಾಡಲಾಗಿದೆ. ವಿವಿಧ ಅರಸು ಮನೆತನಗಳ ಆಳ್ವಿಕೆಯಲ್ಲಿನ ರಾಜಕೀಯ ಮತ್ತು ಆರ್ಥಿಕ ಬೆಳವಣಿಗೆಯನ್ನು ಇಲ್ಲಿ ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಹೈದರಾಬಾದ್ ಸಂಸ್ಥಾನದಲ್ಲಿ ಆಳ್ವಿಕೆ ಮಾಡಿದ ಏಳು ನಿಜಾಮರ ಕಾಲದಲ್ಲಿ ಹೈದರಾಬಾದ್ ರಾಜಕೀಯವಾಗಿ ಬೆಳೆದು ಬಂದ ಹಾದಿಯನ್ನು ವಿಶ್ಲೇಷಿಸಲಾಗಿದೆ. ನಿಜಾಮರು ನಡೆಸಿದ ಯುದ್ಧಗಳು, ಮಾಡಿಕೊಂಡ ಒಪ್ಪಂದಗಳು, ಅಭಿವೃದ್ಧಿ ಕಾರ್ಯಗಳು, ರಾಜ್ಯ ವಿಸ್ತರಣೆ, ಕಾವಲು ಪಡೆಯ ನೇಮಕ ಮುಂತಾದ ವಿಚಾರಗಳ ಕುರಿತು ಇಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಮಿರ್ಜಾ ಎಂ ಇಸ್ಮಾಯಿಲರು ಮೂರು ಸಂಸ್ಥಾನಗಳಾದ ಮೈಸೂರು, ಜಯಪುರ ಮತ್ತು ಹೈದರಾಬಾದ್‌ಗಳಲ್ಲಿ ದಿವಾನರಾಗಿ ಮಾಡಿದ ಸಾಧನೆ ಮತ್ತು ಕೈಗೊಂಡ ಯೋಜನೆಗಳನ್ನು ಅಧ್ಯಯನ ನಡೆಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಮಿರ್ಜಾ ಎಂ ಇಸ್ಮಾಯಿಲರು ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಮಾಡಿದ ರಾಜಕೀಯ ಬದಲಾವಣೆ, ಹುಸೇನಸಾಗರ ಸರೋವರದ ಅಭಿವೃದ್ಧಿ, ಗೋವಾ ಪ್ರದೇಶ ವಶಪಡಿಸಿಕೊಳ್ಳಲು ನಡೆಸಿದ ಪ್ರಯತ್ನ, ಬಿರಾರ್ ಪ್ರದೇಶವನ್ನು ವಶಪಡಿಸಿಕೊಂಡ ಬಗೆ ಮುಂತಾದ ವಿಚಾರಗಳ ಕುರಿತು ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯದಲ್ಲಿ ಮಿರ್ಜಾ ಎಂ ಇಸ್ಮಾಯಿಲರು ರಾಷ್ಟ್ರನಾಯಕರೊಂದಿಗೆ ಹಾಗೂ ರಾಷ್ಟ್ರೀಯ ಕಾಂಗ್ರೆಸ್‌ನೊಂದಿಗೆ, ಗಾಂಧೀಜಿಯವರೊಂದಿಗೆ, ಮಹಮ್ಮದ ಅಲಿ ಜಿನ್ನಾರೊಂದಿಗೆ ಹೊಂದಿದ್ದ ಸಂಬಂಧದ ಕುರಿತು ಚರ್ಚಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಮಿರ್ಜಾ ಇಸ್ಮಾಯಿಲರು ದಿವಾನ್ ಹುದ್ದೆಗೆ ರಾಜೀನಾಮೆ ನೀಡಬೇಕಾಗಿ ಬಂದ ಸಂದರ್ಭವನ್ನು, ರಜಾಕಾರರು ನಡೆಸಿದ ಪಿತೂರಿಗಳನ್ನು, ಈ ಕುರಿತಾದ ನಿಜಾಮನ ಧೋರಣೆಗಳನ್ನು ಹಾಗೂ ಇವರ ರಾಜೀನಾಮೆಗೆ ನಿಜಾಮ, ರಾಜಾಕಾರರು, ಕಾಂಗ್ರೆಸ್, ಅಧಿಕಾರಿಗಳು ಹಾಗೂ ಜನತೆ ನೀಡಿದ ಪ್ರತಿಕ್ರಿಯೆಯ ಕುರಿತು ಚರ್ಚಿಸಲಾಗಿದೆ.

ಎಂಟನೆಯ ಅಧ್ಯಾಯದಲ್ಲಿ ಒಟ್ಟಾರೆಯಾಗಿ ಕಂಡುಕೊಂಡ ಫಲಿತಗಳನ್ನು ಸಮಾರೋಪವಾಗಿ ನೀಡಲಾದೆ.

## ಅಧ್ಯಾಯ ಎರಡು

# ಹೈದರಾಬಾದ್ ಸಂಸ್ಥಾನದ ಚಾರಿತ್ರಿಕ ಹಿನ್ನೆಲೆ

ಹೈದರಾಬಾದ್ ಸಂಸ್ಥಾನದಲ್ಲಿ ಮೂರು ಭಾಷೆಯ ಪ್ರದೇಶಗಳಿದ್ದವು. ಅವುಗಳೆಂದರೆ ತೆಲುಗು, ಮರಾಠಿ ಮತ್ತು ಕನ್ನಡ ಪ್ರದೇಶಗಳು. ಆದರೆ ರಾಜ್ಯ ಭಾಷೆ ಉರ್ದು ಆಗಿತ್ತು. ಆಡಳಿತ ಭಾಷೆಯನ್ನಾಗಿ ಉರ್ದುವನ್ನು ಜಾರಿಗೊಳಿಸಲಾಗಿತ್ತು. ಬೀದರ್, ಗುಲಬರ್ಗಾ ಹಾಗೂ ರಾಯಚೂರು ಜಿಲ್ಲೆಗಳು ನಿಜಾಮ ರಾಜ್ಯದ ಒಂದು ಭಾಗವಾಗಿದ್ದು, ಆಗ ಅದರ ಜನಸಂಖ್ಯೆ ೨೩,೯೫,೬೫೪ ಇತ್ತೆಂದು ಹೇಳಲಾಗಿದೆ. ನಿಜಾಮ ರಾಜ್ಯದಲ್ಲಿ ತೆಲಂಗಾಣದ ಎಂಟು ಜಿಲ್ಲೆಗಳಾದ ಮಹಬೂಬನಗರ, ನಲ್ಗೊಂಡ ಮತ್ತು ವಾರಂಗಲ್, ಮರಾಠವಾಡದ ಐದು ಜಿಲ್ಲೆಗಳಾದ ಔರಂಗಾಬಾದ್, ಜಾಲನಾ, ಪರಬಣಿ, ನಾಂದೇಡ್, ಉಸ್ಮಾನಾಬಾದ್ ಹೊಸ ಜಿಲ್ಲೆಯಾದ ಬೀಡಿ, ಲಾತೂರು ಮತ್ತು ಕರ್ನಾಟಕದ ಮೂರು ಜಿಲ್ಲೆಗಳಾದ ಬೀದರ್, ಗುಲಬರ್ಗಾ, ರಾಯಚೂರು ಹಾಗೂ ಹೊಸ ಜಿಲ್ಲೆಯಾದ ಕೊಪ್ಪಳ ಇದ್ದವು. ಈ ಸಂಸ್ಥಾನದ ನಿರ್ಮಾಣ ಪೂರ್ವದಲ್ಲಿ ಇಲ್ಲಿ ಅನೇಕ ಅರಸುಮನೆತನಗಳು ಆಳ್ವಿಕೆ ನಡೆಸಿದ್ದವು. ಅವುಗಳ ಸಂಕ್ಷಿಪ್ತವಾದ ವಿವರ ಈ ಕೆಳಗಿನಂತಿವೆ.

### ಮೌರ್ಯ ಸಾಮ್ರಾಜ್ಯ

ಮೌರ್ಯರು ಪಾಟಲಿಪುತ್ರವನ್ನು ರಾಜಧಾನಿಯಾಗಿಸಿಕೊಂಡು ಆಳಿದ ಪ್ರಖ್ಯಾತ ಅರಸರು ಮೌರ್ಯವಂಶದ ಅರಸರು ಆಂಧ್ರಪ್ರದೇಶದ ಕರ್ನೂಲು, ರಾಜೋಲು, ಮಂಗಿರಿ ಮತ್ತು ಯರ್ರೆಗುಡಿ ಪ್ರದೇಶಗಳ ಮೇಲೆ ನಿಯಂತ್ರಣ ಸಾಧಿಸಿದರು. ಹಾಗೇ ಮೌರ್ಯರು ಗುಲಬರ್ಗಾ ಜಿಲ್ಲೆಯಲ್ಲೂ ಆಳ್ವಿಕೆ ನಡೆಸಿದರು. ಸನ್ನತಿಯಲ್ಲಿ ಮೌರ್ಯ ಸಾಮ್ರಾಜ್ಯದ ಅಶೋಕನ ಆಳ್ವಿಕೆಗೆ ಸಂಬಂಧಿಸಿದ ಕುರುಹುಗಳಿವೆ. ಇದು ದಕ್ಷಿಣ ಭಾಗದಲ್ಲಿ ಒಂದು ಪ್ರಮುಖ ಪಟ್ಟಣವಾಗಿದ್ದಿತ್ತೆಂಬುದರಲ್ಲಿ ಸಂಶಯವಿಲ್ಲ. ಅಷ್ಟೇ ಅಲ್ಲದೆ ಇನ್ನೊಂದು ಪ್ರಮುಖ ಆಡಳಿತ ಕೇಂದ್ರವೂ ಆಗಿದ್ದಿರಬೇಕು. ರಾಯಚೂರಿನ ಪ್ರದೇಶಗಳು ಕೂಡ ಮೌರ್ಯ ಸಾಮ್ರಾಜ್ಯಕ್ಕೆ ಒಳಪಟ್ಟಿದ್ದವು. ಇಲ್ಲಿನ ಮಸ್ಕಿ ಶಾಸನದಿಂದ ಈ ಪ್ರದೇಶವು ಮೌರ್ಯರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿಯುತ್ತದೆ.[೧]

## ಶಾತವಾಹನರು

ಶಾತವಾಹನರು ಪೈಠಾನವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುವರು ೪೫೦ ವರ್ಷಗಳವರೆಗೆ ರಾಜ್ಯಭಾರ ಮಾಡಿದರು. ಇವರ ಮೂಲವನ್ನು ಕುರಿತು ಕೆಲವು ಇತಿಹಾಸಕಾರರು ಆಂಧ್ರರೆಂದಿದ್ದಾರೆ. ಇವರ ಕೆಲವು ನಾಣ್ಯಗಳಲ್ಲಿ ಆಂಧ್ರಭೃತ್ಯರೆಂದು ಉಲ್ಲೇಖಿಸಲಾಗಿದೆ. ಅಶೋಕನ ಕಾಲದ ಶಾಸನವೊಂದ ರಲ್ಲಿಯೂ ಇದೇ ಉಲ್ಲೇಖವಿದೆ. ಶಾತವಾಹನರ ಕಾಲಕ್ಕೆ ಸಂಬಂಧಿಸಿದ ನಾಗಾರ್ಜುನಕೊಂಡದಲ್ಲಿ ನಿರ್ಮಾಣವಾಗಿರುವ ಸ್ತೂಪ ಕಂಡುಬರುತ್ತದೆ. ಅದೇ ರೀತಿ ಗುಲಬರ್ಗಾದ ಸನ್ನತಿಯಲ್ಲಿ ಶಾತವಾಹನರ ಕಾಲದ ಆವಶೇಷಗಳು ದೊರೆತಿವೆ. ಅದರಲ್ಲಿ ಇಟ್ಟಿಗೆಯ ರಕ್ಷಣಾಗೋಡೆ ಪ್ರಮುಖವಾದದ್ದು. ಇದರಿಂದಾಗಿ ಈ ಪ್ರದೇಶ ಶಾತವಾಹನರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿಯುತ್ತದೆ.[೨]

## ಬಾದಾಮಿ ಚಾಲುಕ್ಯರು

ಬಾದಾಮಿ ಚಾಲುಕ್ಯರು ಹೈದರಾಬಾದಿನ ವೇಮುಲವಾಡ ಪ್ರದೇಶದಲ್ಲಿ ಆಡಳಿತವನ್ನು ನಡೆಸಿದರು. ಆಂಧ್ರಪ್ರದೇಶದ ಕೆಲವು ಅರಸರು ಒಂದುಗೂಡಿ ಕೊಲಿಯಾರು ಸರೋವರದ ಹತ್ತಿರ ಎರಡನೆಯ ಪುಲಿಕೇಶಿಯ ಮೇಲೆ ಯುದ್ಧ ನಡೆಸಿದರು. ಪುಲಿಕೇಶಿ ಅವರನ್ನು ಸೋಲಿಸಿ ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಅದೇ ರೀತಿಯಾಗಿ ರಾಯಚೂರು ಜಿಲ್ಲೆ ಕೂಡ ಬಾದಾಮಿ ಚಾಲುಕ್ಯರ ವಶವಾಗಿತ್ತೆಂದು ಐಹೊಳೆ ಶಾಸನದಿಂದ ತಿಳಿದುಬರುತ್ತದೆ.[೩]

## ರಾಷ್ಟ್ರಕೂಟರು

ಕ್ರಿ.ಶ.೭೫೩ರಲ್ಲಿ ಬಾದಾಮಿ ಚಾಲುಕ್ಯರನ್ನು ಸೋಲಿಸಿ ದಂತಿದುರ್ಗ ರಾಷ್ಟ್ರಕೂಟರ ರಾಜ್ಯವನ್ನು ಸ್ಥಾಪಿಸಿದನು. ರಾಷ್ಟ್ರಕೂಟರು ಗುಲಬರ್ಗಾ ಜಿಲ್ಲೆಯ ಮಾನ್ಯಖೇಟವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದರು. ಇವರ ಅಧೀನಕ್ಕೆ ಆಂಧ್ರಪ್ರದೇಶದ ಕೆಲವು ಪ್ರದೇಶಗಳು ಒಳಪಟ್ಟಿದ್ದವು. ಅದರಲ್ಲಿ ವೇಮುಲವಾಡವು ಕೂಡ ಒಂದು.[೪] ಹಾಗೆಯೇ ರಾಷ್ಟ್ರಕೂಟರ ಅಧೀನಕ್ಕೆ ದೇವದುರ್ಗವು ಒಳಪಟ್ಟಿತ್ತು. ದೇವದುರ್ಗವು ರಾಷ್ಟ್ರಕೂಟರ ಆಳ್ವಿಕೆಗೆ ಒಳಪಟ್ಟಿತ್ತೆಂಬುದಕ್ಕೆ ನಾಗೋಲಿಯಲ್ಲಿ ದೊರೆತ ಶಾಸನ ಮತ್ತು ಆಲ್ಕೋಡ ಗ್ರಾಮದಲ್ಲಿರುವ ಭದ್ರಕಾಳಿ, ಮಹಿಷಾಸುರ ಮರ್ದಿನಿ, ಗಣೇಶನ ವಿಗ್ರಹಗಳು ಸಾಕ್ಷಿಯಾಗಿವೆ. ಹೀಗಾಗಿ ಈ ಪ್ರದೇಶಗಳು ರಾಷ್ಟ್ರಕೂಟರ ಆಳ್ವಿಕೆಗೆ ಸೇರಿತ್ತೆಂದು ತಿಳಿದುಬರುತ್ತದೆ.[೫]

## ಕಲ್ಯಾಣ ಚಾಲುಕ್ಯರು

ಕರ್ನಾಟಕವನ್ನು ಆಳಿದ ಪ್ರಮುಖ ರಾಜಮನೆತನಗಳಲ್ಲಿ ಕಲ್ಯಾಣ ಚಾಲುಕ್ಯರ ಮನೆತನವು ಒಂದಾಗಿದೆ. ರಾಷ್ಟ್ರಕೂಟರನ್ನು ಸೋಲಿಸಿ ಉತ್ತರಾಧಿಕಾರಿಗಳಾಗಿ ಬಂದ ಈ ಮನೆತನವು ಕಲ್ಯಾಣ ನಗರವನ್ನು

ರಾಜಧಾನಿಯನ್ನಾಗಿ ಮಾಡಿಕೊಂಡು ಕರ್ನಾಟಕ ಮತ್ತು ಆಂಧ್ರಪ್ರದೇಶದ ಕೆಲವು ಪ್ರದೇಶಗಳನ್ನು ತನ್ನ ಆಡಳಿತ ವ್ಯಾಪ್ತಿಗೆ ತಂದು ಆಳ್ವಿಕೆ ನಡೆಸಿತು.[೬]

ಇವರನ್ನು ಕಲ್ಯಾಣ ಚಾಲುಕ್ಯರೆಂದು ಕರೆಯಲಾಗಿದೆ. ಇವರ ಆಸ್ಥಾನ ಕವಿಯಾದ ವಿಜ್ಞಾನೇಶ್ವರ ಗುಲಬರ್ಗಾ ಜಿಲ್ಲೆಯ ಮರತ್ತೂರಿನಲ್ಲಿ ಜನಿಸಿದನು ಎಂದು ಆತನ ಕೃತಿಯಾದ ಮಿತಾಕ್ಷರದಿಂದ ತಿಳಿಯುತ್ತದೆ. ಹಾಗೇ ಗುಲಬರ್ಗಾ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಮೋಘಾ ಎಂಬ ಗ್ರಾಮದಲ್ಲಿ ಇವರ ಕಾಲದ ರಾಮೇಶ್ವರ ದೇವಾಲಯದ ಪಕ್ಕದಲ್ಲಿ ಸಿಕ್ಕ ಕೆಲವು ಅವಶೇಷಗಳಿಂದ ಈ ಪ್ರದೇಶವು ಕೂಡ ಇವರ ಆಳ್ವಿಕೆಗೆ ಒಳಪಟ್ಟಿತ್ತು ಎಂದು ತಿಳಿದುಬರುತ್ತದೆ.[೭] ಅದೇ ರೀತಿಯಾಗಿ ದೇವದುರ್ಗವನ್ನು ಕಲ್ಯಾಣ ಚಾಲುಕ್ಯರು ಆಳ್ವಿಕೆಗೊಳಪಡಿಸಿಕೊಂಡಿದ್ದರು. ಇದಕ್ಕೆ ಸಾಕ್ಷಿಯಾಗಿರುವಂತೆ ಅನೇಕ ಶಾಸನಗಳು ಇದರ ಬಗ್ಗೆ ಮಾಹಿತಿಯನ್ನು ಒದಗಿಸುತ್ತವೆ. ಕಲ್ಯಾಣ ಚಾಲುಕ್ಯರ ಕಾಲದ ಪ್ರಮುಖ ಆಡಳಿತ ಘಟಕಗಳೆಂದರೆ ಅಯ್ಯಣವಾಡಿ ೩೦೦ ಹಾಗೂ ಮೊಸಳಿಕಲ್ಲು ೩೦೦. ಜಗದೇಕಮಲ್ಲ ಇಮ್ಮಡಿ ಜಯಸಿಂಹನ ಆಳ್ವಿಕೆಯ ಬಗ್ಗೆ ಕ್ರಿ.ಶ.೧೦೨೮ರ ಗಣಜಲಿ ಶಾಸನ, ೬ನೇ ವಿಕ್ರಮಾದಿತ್ಯನ ಆಳ್ವಿಕೆಯ ಕುರುಹುಗಳಾಗಿ ಕಲ್ಯಾಣವನ್ನು ಕುರಿತು ವಿಜ್ಞಾನೇಶ್ವರ ತನ್ನ ಮಿತಾಕ್ಷರ ಸಂಹಿತೆಯಲ್ಲಿ ಕಲ್ಯಾಣದಂತಹ ನಗರ ಹಿಂದಿರಲಿಲ್ಲ. ಮುಂದಿರಲಾರದು ಮತ್ತು ವಿಕ್ರಮಾದಿತ್ಯನಂತಹ ಅರಸನು ಕಂಡಿಲ್ಲ ಮತ್ತು ಕೇಳಿಲ್ಲ ಎಂದು ಹೇಳಿದ್ದಾನೆ. ಈ ಮೇಲಿನ ಶಾಸನಗಳ ಆಧಾರದ ಮೇಲೆ ಈ ಪ್ರದೇಶಗಳು ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿದ್ದವು ಎಂಬುದಾಗಿ ತಿಳಿದುಬರುತ್ತದೆ.[೮]

## ಕಲಚೂರಿಗಳು

ಕಲ್ಯಾಣ ಚಾಲುಕ್ಯರ ಸಾಮಂತ ಅರಸರಲ್ಲಿ ಒಬ್ಬರಾದ ಕಲಚೂರಿಗಳು ಸ್ವತಂತ್ರರಾಗಿ ರಾಜ್ಯಭಾರ ಮಾಡಿದ್ದು ಬಹು ಕಡಿಮೆ ಕಾಲವೆಂದು ಹೇಳಬಹುದು. ಇವರು ತಾವು ಯದು ಮತ್ತು ಕಾರ್ತವೀರ್ಯಾರ್ಜುನರ ಕುಲಕ್ಕೆ ಸೇರಿದವರೆಂದು ಹೇಳಿಕೊಂಡಿದ್ದಾರೆ. ಇವರು ಶಿವನ ವಾಹನವಾಗಿದ್ದ ನಂದಿಯನ್ನು ತಮ್ಮ ಲಾಂಛನವಾಗಿಟ್ಟುಕೊಂಡು ಆಳ್ವಿಕೆ ನಡೆಸಿದ್ದಾರೆ. ಬಿಜ್ಜಳ ಪ್ರಾರಂಭದಲ್ಲಿ ಕಲ್ಯಾಣವನ್ನು ರಾಜಧಾನಿಯಾಗಿ ಮಾಡಿಕೊಂಡು, ನಂತರ ಆಂಧ್ರಪ್ರದೇಶದ ಮಂಗಳವೇಡೆ ಎಂಬುದನ್ನು ಎರಡನೆಯ ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆಯನ್ನು ಮಾಡಿದ್ದನು.[೯] ಅದೇ ರೀತಿ ದೇವದುರ್ಗ ಮತ್ತು ರಾಯಚೂರು ಪ್ರದೇಶಗಳು ಇವರ ಆಳ್ವಿಕೆಗೆ ಒಳಪಟ್ಟಿದ್ದವೆಂದು ಹೇಳಲು ಬಿಜ್ಜಳನ ಮಗರಾಯ ಮುರಾರಿಯು ಕ್ರಿ.ಶ.೧೧೭೦ರ ಗೊಬ್ಬೂರಿನ ಹರಿಹರ ದೇವಾಲಯದಲ್ಲಿರುವ ಶಾಸನ ಏಳು ಬಾವಿ ಬಸವಣ್ಣನ ಗುಡಿಯ ಬಲಪಕ್ಕದಲ್ಲಿದ್ದ ಶಾಸನ ಕ್ರಿ.ಶ.೧೧೭೭ರ ನಿಲುವಾಜಿ ಶಾಸನಗಳಿವೆ. ಇವುಗಳ ಆಧಾರದ ಮೇಲೆ ಕಲಚೂರಿಗಳು ದೇವದುರ್ಗ ಮತ್ತು ರಾಯಚೂರಿನ ಪ್ರದೇಶದಲ್ಲಿ ಆಳ್ವಿಕೆ ಮಾಡಿದರೆಂದು ತಿಳಿಯುತ್ತದೆ.[೧೦]

## ದೇವಗಿರಿಯ ಯಾದವರು

ರಾಯಚೂರು ಮತ್ತು ದೇವದುರ್ಗ ಪ್ರದೇಶವು ದೇವಗಿರಿ ಯಾದವರ ಆಳ್ವಿಕೆಗೆ ಒಳಪಟ್ಟಿದ್ದವು. ಇವರ ಶಾಸನಗಳು ರಾಯಚೂರು ಮತ್ತು ದೇವದುರ್ಗದಲ್ಲಿ ಲಭ್ಯವಾಗಿವೆ. ಗಬ್ಬೂರಿನ ವೆಂಕಟೇಶ್ವರ ದೇವಾಲಯದ ಆವರಣದಲ್ಲಿರುವ ಕ್ರಿ.ಶ.೧೨೧೩ರ ಶಾಸನ ಮತ್ತು ವೀರಗೋಟನಲ್ಲಿರುವ ಮೌನೇಶ್ವರರು ತಪಸ್ಸು ಮಾಡಿದ ಗಡಿಯಲ್ಲಿರುವ ಕ್ರಿ.ಶ.೧೨೨೩ರ ಶಾಸನಗಳಿವೆ. ಇವುಗಳ ಆಧಾರದ ಮೇಲೆ ರಾಯಚೂರು ಮತ್ತು ದೇವದುರ್ಗ ಪ್ರದೇಶಗಳು ಇವರ ಆಳ್ವಿಕೆಗೆ ಒಳಪಟ್ಟಿದ್ದವು ಎಂದು ತಿಳಿದುಬರುತ್ತದೆ.[೧೧] ಹಾಗೇ ದೇವಗಿರಿಯ ಯಾದವರ ಪ್ರಮುಖ ಮತ್ತು ಬೀರಾರಿನ ಪೂರ್ವ ಪ್ರಾಂತ್ಯಗಳವರೆಗೆ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು. ಇದರಿಂದ ಹೈದರಾಬಾದ್ ಮತ್ತು ಬೀರಾರ ದೇವಗಿರಿಯ ಯಾದವರ ಆಳ್ವಿಕೆಗೆ ಒಳಪಟ್ಟಿತ್ತೆಂದು ತಿಳಿಯುತ್ತದೆ.[೧೨]

## ವಾರಂಗಲ್‌ನ ಕಾಕತೀಯರು

ರಾಯಚೂರು ಪ್ರದೇಶದಲ್ಲಿ ವಾರಂಗಲ್‌ನ ಕಾಕತೀಯರು ಆಳ್ವಿಕೆ ನಡೆಸುತ್ತಿದ್ದರು. ಇಲ್ಲಿನ ಕ್ರಿ.ಶ.೧೨೯೪ರ ಶಾಸನ ಪ್ರಕಾರ ಕಾಕತೀಯ ಅರಸ ರುದ್ರದೇವನು ಆಡಳಿತ ನಡೆಸುತ್ತಿದ್ದನು. ಇವನ ಮಾಂಡಲಿಕನಾದ ಗೋನಗನ್ನಯ್ಯ ರೆಡ್ಡಿ ಎಂಬುವವನು ವರ್ಧಮಾನಪುರದಿಂದ ಆಳುತ್ತಿದ್ದನು. ಇವನ ದಂಡನಾಯಕನಾದ ವಿಠಲನಾಥ ನಾಯಕನು ರಾಯಚೂರಿನಲ್ಲಿ ಆಳ್ವಿಕೆ ಮಾಡುವಾಗ ದೇವದುರ್ಗ ಪ್ರದೇಶವು ಇವನ ಅಧೀನದಲ್ಲಿತ್ತೆಂದು ಮತ್ತು ಆ ಸಂದರ್ಭದಲ್ಲಿ ದೇವದುರ್ಗದಲ್ಲಿ ಬೇಡರ ಪಡೆಯಿತ್ತೆಂದು ತಿಳಿದುಬರುತ್ತದೆ.[೧೩]

## ವಿಜಯನಗರ ಸಾಮ್ರಾಜ್ಯ

ವಿಜಯನಗರ ಸಾಮ್ರಾಜ್ಯವು ಸ್ಥಾಪನೆಯಾದಾಗಿನಿಂದಲೂ ಆಂಧ್ರಪ್ರದೇಶದ ಮೇಲೆ ಯುದ್ಧ ಮಾಡುತ್ತಾ ಹಾಗೇ ಆಂಧ್ರರ ವಿರುದ್ಧ ಯುದ್ಧಗಳನ್ನು ನಡೆಸುತ್ತಾ ಬಂದಿತು. ಒಂದನೆಯ ದೇವರಾಯನು ಆಂಧ್ರದ ರಾಚಕೊಂಡ ಹಾಗೂ ಕೊಂಡವೀಡಿನ ರೆಡ್ಡಿ ಪ್ರದೇಶಗಳನ್ನು ತನ್ನ ಆಳ್ವಿಕೆಗೆ ಒಳಪಡಿಸಿಕೊಂಡನು. ಮುಂದೆ ಅಧಿಕಾರಕ್ಕೆ ಬಂದ ಎರಡನೆಯ ದೇವರಾಯನು ಕನಾಡ ಕೊಂಡವೀಡು, ರಾಚಕೊಂಡ ಮತ್ತು ರಾಜಮಹೇಂದ್ರಿಯ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡನು.[೧೪] ಕೃಷ್ಣದೇವರಾಯನು ಕೊಂಡವೀಡು, ಉದಯಗಿರಿ, ರಾಯಚೂರಿನ ಮೇಲೆ ಯುದ್ಧವನ್ನು ಸಾರಿ ಈ ಪ್ರದೇಶಗಳನ್ನು ವಶಪಡಿಸಿಕೊಂಡನು ಎಂದು ಕೆಲವು ಶಾಸನಗಳು ಹೇಳುತ್ತವೆ. ಇದನ್ನು ನ್ಯೂನಿಜ್ ಕೂಡ ಬರೆದಿದ್ದಾನೆ. ವಾರಂಗಲ್ಲು ಕೃಷ್ಣೆಯ ದಕ್ಷಿಣಕ್ಕಿರುವ ಬೆಲ್ಲಂಕೊಂಡ ಪ್ರದೇಶಗಳನ್ನು ವಶಪಡಿಸಿಕೊಂಡನು.[೧೫] ಅಲ್ಲದೆ ವಿಜಯನಗರದ ಅವನತಿಗೆ ರಾಯಚೂರು ಜಿಲ್ಲೆಯ ದೋ-ಆಬ್ ಪ್ರದೇಶ ಪ್ರಮುಖ ಕಾರಣವಾಗಿದೆ. ಇದರ ಸಲುವಾಗಿ ಬಹಮನಿ

ಮತ್ತು ವಿಜಯನಗರಗಳ ಮಧ್ಯ ನಡೆದ ಯುದ್ಧಗಳು ದೇವದುರ್ಗ ಪ್ರದೇಶದಲ್ಲಿ ಜರುಗಿವೆ. ಅಲ್ಲದೆ ೧೫೨೦ರ ಯುದ್ಧ ಆದಿಲ್‌ಶಾಹಿಗಳೊಂದಿಗೆ ನಡೆದದ್ದು ಕೊಪ್ಪ, ಗುಂಡಗುರ್ತಿ, ಗೊಬ್ಬೂರು ಪ್ರದೇಶಗಳಲ್ಲಿ ಹೀಗೆ ದೇವದುರ್ಗ ವ್ಯಾಪ್ತಿಯಲ್ಲಿ ಬರುವ ಹೊಳೆ ಸಾಲಿನಲ್ಲಿ ಯುದ್ಧ ನಡೆದಿವೆ. ಈ ಎಲ್ಲಾ ಕಾರಣದಿಂದ ರಾಯಚೂರಿನ ದೋ-ಆಬ್ ಪ್ರದೇಶ ವಿಜಯನಗರ ಆಳ್ವಿಕೆ ಒಳಪಟ್ಟಿತ್ತು ಎಂದು ಕಂಡುಬರುತ್ತದೆ.[೧೭]

## ಬಹಮನಿ ಸಾಮ್ರಾಜ್ಯ

ಬಹಮನಿ ಸುಲ್ತಾನರು ವಿಜಯನಗರ ಸಾಮಾಜ್ಯದ ಸಮಕಾಲೀನ ಅರಸುಮನೆತನವಾಗಿದೆ. ಇದು ಮೊದಲು ಗುಲಬರ್ಗಾವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿತ್ತು. ಕ್ರಿ.ಶ.೧೪೨೫ರಲ್ಲಿ ಅಹಮದ್ ಷಾನ ಆಳ್ವಿಕೆಯಲ್ಲಿ ಬೀದರ್‌ಗೆ ರಾಜಧಾನಿಯನ್ನು ಸ್ಥಳಾಂತರಿಸಲಾಯಿತು. ಅಹಮದ್ ಷಾಹನು ತನ್ನ ಕಾಲಾವಧಿಯಲ್ಲಿ ತೆಲಂಗಾಣದ ಕೆಲವು ಪ್ರದೇಶಗಳನ್ನು ವಶಪಡಿಸಿಕೊಂಡು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು ಎಂದು ಫೆರಿಸ್ತ ತನ್ನ ಬರವಣಿಗೆಯಲ್ಲಿ ಹೇಳಿದ್ದಾನೆ. ರಾಯಚೂರಿನ ದೋ-ಆಬ್ ಪ್ರದೇಶವನ್ನು ತನ್ನ ಆಳ್ವಿಕೆಗೆ ಸೇರಿಸಿಕೊಳ್ಳಲು ನಿರಂತರವಾಗಿ ವಿಜಯನಗರ ಸಾಮ್ರಾಜ್ಯದ ಜೊತೆ ಹೋರಾಡಿರುವುದು ಕೂಡ ಫೆರಿಸ್ತನಿಂದ ತಿಳಿದುಬರುತ್ತದೆ.[೧೮]

## ಕಾಕಲವಾಡ ಮನೆತನ

ವಿಜಯನಗರ ಸಾಮ್ರಾಜ್ಯದ ಪತನಾನಂತರ ಅಸ್ತಿತ್ವಕ್ಕೆ ಬಂದವುಗಳಲ್ಲಿ ವೀರಶೈವ ಅರಸುಮನೆತನಗಳು ಪ್ರಮುಖವಾದವು. ಬೇಡ ಮನೆತನದ ರಾಜರಂತೆ ಇವರೂ ಸ್ವತಂತ್ರ ಅರಸರಾಗಿದ್ದರು. ಬಹಮನಿ ಹಾಗೂ ಮರಾಠ ಸಾಮ್ರಾಜ್ಯಗಳ ಆಳ್ವಿಕೆಯ ಬಳಿಕ ವೀರಶೈವ ದೇಸಾಯಿ, ದೇಶಮುಖ ಮನೆತನಗಳು ಹುಟ್ಟಿಕೊಂಡವು. ಇಂಥ ಸ್ಥಳೀಯ ರಾಜಮನೆತನಗಳು ಹೈದರಾಬಾದ್ ಕರ್ನಾಟಕದ ಹಲವೆಡೆಗಳಲ್ಲೂ ಇದ್ದವು. ಇವುಗಳಲ್ಲಿ ಯಾದಗಿರಿ ತಾಲ್ಲೂಕಿನ ಕಾಕಲವಾಡದ ದೇಶಮುಖ ಸಂಸ್ಥಾನವು ಒಂದು. ಯಾದಗಿರಿಯಿಂದ ಸುಮಾರು ೪೫ ಕಿ.ಮೀ. ದೂರದ ಕಾಕಲವಾಡು ಸಂಸ್ಥಾನಿಕರು ವೀರಶೈವ ಧರ್ಮೀಯ ರಾಗಿದ್ದರು. ಈ ಅರಸರನ್ನು ಸ್ಥಳೀಯರು ದೊರೆ ಎಂದು ಆಂಧ್ರ ಭಾಷೆಯಲ್ಲಿ ಕರೆಯುತ್ತಿದ್ದರು. ಇವರ ಆಳ್ವಿಕೆಯಲ್ಲಿ ಹೈದ್ರಾಬಾದ್ ಕರ್ನಾಟಕದ ಸೇಡಂ, ಮೋಟಕಪಲ್ಲಿ, ಚಂಡರಕೆ, ನಾರಾಯಣಪುರ, ಗುರುಮಠಕಲ್ ಪ್ರದೇಶಗಳು ಕಾಕಲವಾಡ ಮನೆತನದ ಆಳ್ವಿಕೆಯಲ್ಲಿದ್ದವು. ಆಂಧ್ರಪ್ರದೇಶದ ನಗರದಪಲ್ಲಿ, ಪದಂಪಲ್ಲಿ, ಬರೆಪಲ್ಲಿ, ರೆಡ್ಡಿಪಲ್ಲಿ ಮೊದಲಾದ ಸುಮಾರು ೨೦೦ ಗ್ರಾಮಗಳು ಈ ಮನೆತನದ ಆಳ್ವಿಕೆಯಲ್ಲಿದ್ದವು ಎಂದು ತಿಳಿದುಬರುತ್ತದೆ.[೧೯]

## ದೆಹಲಿ ಸುಲ್ತಾನರು

ಅಲಾವುದ್ದೀನ್ ಖಿಲ್ಜಿಯ ಆಳ್ವಿಕೆಯ ಕಾಲದಲ್ಲಿ ದೇವಗಿರಿಯ ಯುದ್ಧದಲ್ಲಿ ದೊರೆತ ವಿಜಯವು ವಾರಂಗಲ್ ಮೇಲೆ ದಂಡಯಾತ್ರೆ ಕೈಗೊಳ್ಳಲು ಪ್ರೇರಣೆ ನೀಡಿತು. ಕ್ರಿ.ಶ.೧೩೦೩ರಲ್ಲಿ ಕೈಗೊಂಡ ಮೊದಲ

ಪ್ರಯತ್ನವು ವಿಫಲವಾಗಿದ್ದು, ತನ್ನ ತೋಳ್ಬಲದ ಘನತೆಯನ್ನು ಅಲ್ಲಿ ಮತ್ತೆ ಪ್ರದರ್ಶಿಸಬೇಕಾಗಿತ್ತು. ಕ್ರಿ.ಶ.೧೩೨೯ರಲ್ಲಿ ಮಲಿಕ್ ನಾಯಿಬನು ದೆಹಲಿಯಿಂದ ಸೇನೆಯೊಂದಿಗೆ ಬಸಿರಾಗಡ ಮೂಲಕ ತೆಲಂಗಾಣ ಪ್ರದೇಶವನ್ನು ಪ್ರವೇಶಿಸಿ ವಶಪಡಿಸಿಕೊಂಡನು.[೧೯] ಮುಂದೆ ಅಧಿಕಾರಕ್ಕೆ ಬಂದ ತುಘಲಕ್ ಮನೆತನದ ಮಹಮ್ಮದ್ ಬಿನ್ ತುಘಲಕ್‌ನ ಕಾಲದಲ್ಲಿ ಕೃಷ್ಣ, ತುಂಗಭದ್ರಾ ಪ್ರದೇಶದ ಕರಾವಳಿಯ ದಕ್ಷಿಣದ ಇಡೀ ಪ್ರದೇಶ, ತೆಲಂಗಾಣದ ಸ್ವಲ್ಪ ಭಾಗ, ಆಂಧ್ರ ಕರಾವಳಿಗಳು ಇವನ ಆಳ್ವಿಕೆಗೆ ಒಳಪಟ್ಟವು ಎಂದು ಕಂಡುಬರುತ್ತದೆ. ಹೀಗೆ ದೆಹಲಿ ಸುಲ್ತಾನರ ಕಾಲದಲ್ಲಿ ತೆಲಂಗಾಣದ ಸ್ವಲ್ಪ ಭಾಗಗಳು, ಆಂಧ್ರ ಕರಾವಳಿಯ ಕೆಲವು ಭಾಗಗಳು ಕಂಪ್ಲಿ ಮತ್ತು ತುಂಗಭದ್ರಾದವರೆಗಿನ ಪ್ರದೇಶಗಳು ಆಳ್ವಿಕೆಗೆ ಒಳಪಟ್ಟಿದ್ದವು.[೨೦]

### ಗೋಲ್ಕೊಂಡದ ಕುತ್ಬ್ ಷಾಹಿ ಮನೆತನ

ಗೋಲ್ಕೊಂಡದ ಪ್ರತ್ಯೇಕ ಮನೆತನಕ್ಕೆ ಬುನಾದಿ ಹಾಕಿದ ಸುಲ್ತಾನ್ ಕುಲಿ ಕುತ್ಬ್ ಷಾಹ ತುರ್ಕಿ ಮನೆತನಕ್ಕೆ ಸೇರಿದ್ದನು. ಅವನು ಹುಟ್ಟಿದುದು ಪರ್ಷಿಯಾದ ಹಮದನ್ ಎಂಬಲ್ಲಿ. ಅವನು ತನ್ನ ತಾರುಣ್ಯದಲ್ಲಿಯೇ ಬಹಮನಿ ಸುಲ್ತಾನನಾಗಿದ್ದ ಮೂರನೇ ಮಹಮ್ಮದ ಷಾಹನ ಆಳ್ವಿಕೆಯ ಕಾಲದಲ್ಲಿ ದಖ್ಖನಿಗೆ ಬಂದು ಮಹಮ್ಮದ ಷಾಹನ ಅಂಗರಕ್ಷಕನಾಗಿ ತನ್ನ ಜೀವನಗತಿಯನ್ನು ಪ್ರಾರಂಭಿಸಿದನು. ಅವನು ತನ್ನ ಅಸಾಧಾರಣವಾದ ಧೈರ್ಯ, ಕೌಶಲ್ಯ, ಸೂಕ್ಷ್ಮ ವ್ಯವಹಾರ ನಿಪುಣತೆಯಿಂದ ಒಂದು ಪದವಿ ಯಿಂದ ಇನ್ನೊಂದು ಪದವಿಗೆ ಏರುತ್ತಾ ಹೋಗಿ ಕೊನೆಗೆ ಬಹಮನಿ ರಾಜ್ಯದ ಪೂರ್ವ ಪ್ರಾಂತ್ಯವಾಗಿದ್ದ ತೆಲಂಗಾಣದ ಪ್ರಾಂತ್ಯಪಾಲ ಪದವಿಯನ್ನು ಪಡೆದನು. ಅವನು ಅಲ್ಲಿನ ಉತ್ತಮ ಬಿರುದಾಗಿದ್ದ ಕುತ್ಬ್ ಉಲ್ ಮುಲ್ಕ್ ಬಿರುದನ್ನೂ ಸಹ ಗಳಿಸಿದನು.[೨೧]

ಬಹಮನಿ ಆಡಳಿತದ ದೌರ್ಬಲ್ಯವು ವಿವಿಧ ಪ್ರಾಂತ್ಯಪಾಲರಿಗೆ ಸ್ವತಂತ್ರರಾಗಲು ಪ್ರಚೋದನೆ ನೀಡಿತು. ಸುಲ್ತಾನ ಕುಲಿ ಸಹಾ ಇದರ ಲಾಭವನ್ನು ಪಡೆದುಕೊಂಡು ೧೫೧೮ರಲ್ಲಿ ಮಬಮ್ಮದ್ ಷಾಹ ಬಹಮನಿಯ ಮರಣದ ನಂತರ ತಾನೂ ಎಲ್ಲ ಪ್ರಾಂತ್ಯಪಾಲರಂತೆಯೇ ಸ್ವತಂತ್ರನಾದನು. ಅವನ ಆಳ್ವಿಕೆಯ ದೀರ್ಘಾವಧಿಯಲ್ಲಿ ಅವನು ತನ್ನ ರಾಜ್ಯದ ಗಡಿಯ ವಿಸ್ತರಣೆಗಾಗಿ ತನ್ನ ಶಕ್ತಿಯ ಬಹುಪಾಲನ್ನು ವಿನಿಯೋಗಿಸಿದನು. ಅವನು ಅರ್ಧ ತೆಲುಗು ಮಾತನಾಡುವ ಪ್ರಾಂತವನ್ನು ತನ್ನ ವಶಕ್ಕೆ ತೆಗೆದುಕೊಂಡಿದ್ದನು. ಬೆಲ್ಲಂಕೊಂಡ, ಇಂದ್ರಕೊಂಡ, ಕಂಭಮ್ಮೆತ್, ವರಂಗಲ್ ಮೊದಲಾದ ಪ್ರದೇಶಗಳನ್ನು ಗೋಲ್ಕೊಂಡದ ಮನೆತನವು ಸ್ವಾಧೀನಪಡಿಸಿಕೊಂಡಿತು ಎಂದು ತಿಳಿದುಬರುತ್ತದೆ.[೨೨]

### ಮೊಗಲ್ ಸಾಮ್ರಾಜ್ಯ

ಗೋಲ್ಕೊಂಡದ ಕುತ್ಬ್ ಷಾಹಿ ಮನೆತನದ ಅಸಮರ್ಥ ಸುಲ್ತಾನ ಅಬ್ದುಲ್ ಕುತ್ಬ್ ಷಾಹನ ಆಳ್ವಿಕೆಯ ಕಾಲದಲ್ಲಿ ಮೊಗಲರ ಸುಲ್ತಾನನಾದ ಔರಂಗಜೇಬನು ದಖ್ಖನ ಪ್ರದೇಶದ ಪ್ರತಿನಿಧಿಯಾಗಿದ್ದನು.

ಹೇಗಾದರೂ ಮಾಡಿ ಗೋಲ್ಕೊಂಡವನ್ನು ಗೆದ್ದುಕೊಳ್ಳಬೇಕೆಂದು ಕಾತರನಾಗಿದ್ದು, ಅವಕಾಶಕ್ಕಾಗಿ ಕಾಯುತ್ತಿದ್ದನು. ಗೋಲ್ಕೊಂಡದ ಅಬ್ದುಲ್ ಹಸನ್ ಕುತ್ಬ್ ಷಾಹನ ಕಾಲದಲ್ಲಿ ಅಂತಹ ಅವಕಾಶ ಒದಗಿಬಂದಿತ್ತು. ಇದರಿಂದ ಔರಂಗಜೇಬನು ಸಂಪೂರ್ಣವಾಗಿ ಗೋಲ್ಕೊಂಡವನ್ನು ವಶಪಡಿಸಿ ಮೊಗಲ ಸಾಮ್ರಾಜ್ಯಕ್ಕೆ ವಿಲೀನ ಮಾಡಿಕೊಂಡನು.[೨೩] ಗೋಲ್ಕೊಂಡವನ್ನು ಸ್ವತಂತ್ರವಾಗಿ ಬಿಡದೆ ತನ್ನ ಪ್ರತಿನಿಧಿಯನ್ನು ನೇಮಿಸಿ ಮೊಗಲ್ ಸಾಮ್ರಾಜ್ಯದ ದಕ್ಷಿಣ ಪ್ರಾಂತ್ಯಕ್ಕೆ ಸೇರಿಸಿದನು. ಇದರ ಪ್ರಾಂತ್ಯಾಧಿಕಾರಿಯಾಗಿ ಮೀರ್ ಕಮುನುದ್ದೀನನ್ನು ನೇಮಕ ಮಾಡಿದನು. ಔರಂಗಜೇಬನ ಮರಣದ ನಂತರ ಅವನ ನೆಚ್ಚಿನ ದಂಡನಾಯಕನಾಗಿ ಸೇವೆ ಸಲ್ಲಿಸಿದ ನಿಜಾಮ್ ಉಲ್‌ಮುಲ್ಕ್ ಆಸಫ್‌ಜಾಹ ೧೭೧೩ರಲ್ಲಿ ನಿಜಾಮ್ ಆಸಫ್‌ಜಾಹ ವಂಶದ ಸ್ಥಾಪನೆಯನ್ನು ಮಾಡಿದನು.[೨೪] ನಿಜಾಮ್ ಉಲ್‌ಮುಲ್ಕ್ ಆಸಫ್‌ಜಾಹ ಮೊಗಲರ ಅಧೀನದಿಂದ ಸ್ವತಂತ್ರವಾಗಿ ನಿಜಾಮ ಮನೆತನವನ್ನು ಸ್ಥಾಪಿಸಿದನು. ಸುಮಾರು ೧೭೨೪ರಿಂದ ೧೯೪೮ರ ವರೆಗೆ ಏಳು ಜನ ನಿಜಾಮರ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿತು.[೨೫]

## ಅಡಿಟಿಪ್ಪಣಿಗಳು

೧. ಮುನ್ನಿ ಕೆ.ಎಂ.(ಅನು), ನರಸಿಂಹಮೂರ್ತಿ ಎ.ವಿ., ಸಾಮ್ರಾಜ್ಯ ಏಕತಾಯುಗ, ೨೦೦೩, ಪು.೧೦೯

೨. ಮಜುಂದಾರ್ ಪಿ.ಆರ್., ಭಾರದ್ವಾಜ್ ಆರ್.ಕೆ., ದಕ್ಷಿಣ ಭಾರತದ ಇತಿಹಾಸ, ೧೯೯೭, ಪು.೩೪-೩೮

೩. ಅದೇ, ಪು.೬೫

೪. ದಿವಾಕರ ಆರ್.ಆರ್.(ಅನು), ಕರ್ನಾಟಕ ಪರಂಪರೆ, ಸಂಪುಟ ೧, ೧೯೯೨, ಪು.೨೭೮

೫. ಅಮರೇಶ ಆಲ್ಕೋಡ, ದೇವದುರ್ಗ: ಚಾರಿತ್ರಿಕ ಒಂದು ಅಧ್ಯಯನ, ೨೦೦೭, ಪು.೧೨

೬. ರಂಗಸ್ವಾಮಯ್ಯ ಜಿ.ಆರ್., ಕರ್ನಾಟಕದ ಸಂಕ್ಷಿಪ್ತ ಚರಿತ್ರೆ, ೨೦೦೧, ಪು.೧೦೨

೭. ಪಾಟೀಲ್ ಎಂ.ಬಿ.(ಸಂ), ಕರ್ನಾಟಕ ರಾಜ್ಯ ಗುಲಬರ್ಗಾ ಜಿಲ್ಲೆ, ೧೯೯೭, ಪು.೫೬

೮. ಅಮರೇಶ ಆಲ್ಕೋಡ, ಪೂರ್ವೋಕ್ತ, ೨೦೦೭, ಪು.೧೪

೯. ಕೃಷ್ಣರಾವ್ ಎಂ.ವಿ. ಮತ್ತು ಕೇಶವಭಟ್ಟ ಎಂ., ಕರ್ನಾಟಕದ ಇತಿಹಾಸ ದರ್ಶನ, ೧೯೭೦ ಪು.೧೯೮-೧೯೯

೧೦. ಮಹೇಶ, ದೇವದುರ್ಗ ತಾಲ್ಲೂಕಿನ ಶಾಸನಗಳು ಮತ್ತು ದೇವಾಲಯ, ೨೦೦೬, ಪು.೩೧

೧೧. ದೇವರಕೊಂಡಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೭, ೨೦೦೩, ಪು.೩೭

೧೨. ಕೃಷ್ಣರಾವ್ ಎಂ.ವಿ., ಕೇಶವಭಟ್ಟ ಎಂ., ಪೂರ್ವೋಕ್ತ, ಪು.೨೯೫

೧೩. ದುರ್ಗಪ್ಪ, ವಿಜಯನಗರೋತ್ತರಕಾಲೀನ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು ಚಾರಿತ್ರಿಕ ಅಧ್ಯಯನ, ೨೦೦೩, ಪು.೫೪

೧೪. ಮುನ್ನಿ ಕೆ.ಎಂ.(ಅನು), ಪೂರ್ವೋಕ್ತ, ೨೦೦೩, ಪು.೪೩೧ ೪೩೯

೧೫. ರಾಬರ್ಟ್ ಸಿವೆಲ್(ಅನು), ಸದಾನಂದ ಕನವಳ್ಳಿ, ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ, ೨೦೧೦, ಪು.೧೩೬

೧೬. ದೀಕ್ಷಿತ್ ಜಿ.ಎಸ್., ರಾಮಸ್ವಾಮಿ ಬಿ., ಶ್ರೀಕೃಷ್ಣದೇವರಾಯನ ಜೀವನ ಸಾಧನೆಗಳು, ೧೯೯೭, ಪು.೬೨-೬೪

೧೭. ಮುನ್ನಿ ಕೆ.ಎಂ.(ಅನು), ಪೂರ್ವೋಕ್ತ, ಪು.೩೮೩-೩೮೭

೧೮. ಬಸವನಗೌಡ ಪಾಟೀಲ, ಪ್ರಜಾವಾಣಿ ದಿನಪತ್ರಿಕೆ, ಕರ್ನಾಟಕ ದರ್ಶನ, ೨೬.೬.೧೨., ಪು.೧

೧೯. ಮುನ್ನಿ ಕೆ.ಎಂ.(ಸಂ), ನರಸಿಂಹಮೂರ್ತಿ ಎ.ವಿ., ಪೂರ್ವೋಕ್ತ, ಪು.೪೯-೫೦

೨೦. ಹುಸೇನ ಎಂ., ಲೈಫ್ ಆ್ಯಂಡ್ ಫೇಮ್ ಆಫ್ ಮಹಮ್ಮದ್ ಬಿನ್ ತುಘಲಕ್, ಲಂಡನ್, ೧೯೩೮, ಪು.೧೨೫- ೧೨೬

೨೧. ಮುನ್ನಿ ಕೆ.ಎಂ., ಮೊಗಲ್ ಸಾಮ್ರಾಜ್ಯ, ೨೦೦೩, ೨೦೦೩, ಪು.೨೬೦

೨೨. ಶೇರ್ವಾನಿ ಹೆಚ್.ಕೆ., ಪೋಲಿಟಿಕಲ್ ಆ್ಯಂಡ್ ಮಿಲಿಟರಿ ಆ್ಯಸ್ಪೆಕ್ಟ್ಸ್ ಆಫ್ ದಿ ರೀಜನ್ ಆಫ್ ಮಹಮ್ಮದ್, ೧೯೬೨, ಪು.೨೪೨

೨೩. ಸರ್ಕಾರ್ ಜೆ.ಎನ್, ಹಿಸ್ಟರಿ ಆಫ್ ಔರಂಗಜೇಬ್, ಸಂಪುಟ ೯, ೧೯೦೮, ಪು.೧೯೫

೨೪. ಹನುಮಂತರಾಯ, ಗುಲಬರ್ಗಾ ಜಿಲ್ಲೆಯ ರೈತರ ಚಳುವಳಿ: ಒಂದು ಚಾರಿತ್ರಿಕ ಅಧ್ಯಯನ, ಎಂ.ಫಿಲ್. ಪ್ರಬಂಧ, ೨೦೧೯, ಪು.೨೪

೨೫. ಬಸವರಾಜ ಪೊಲೀಸ್ ಪಾಟೀಲ್(ಸಂ), ಬಿಡುಗಡೆ, ೨೦೦೭, ಪು.೧೮

# ಅಧ್ಯಾಯ ಮೂರು

# ನಿಜಾಮರ ಆಳ್ವಿಕೆಯ ಸ್ವರೂಪ

ಹೈದರಾಬಾದ್ ಪ್ರದೇಶವು ಚರಿತ್ರೆಯುದ್ದಕ್ಕೂ ವಿವಿಧ ಅರಸುಮನೆತನಗಳ ಆಳ್ವಿಕೆಗೆ ಒಳಪಟ್ಟು, ನಾನಾ ಸ್ವರೂಪದ ಆಡಳಿತ ಕ್ರಮಗಳಿಗೆ ಒಳಗಾಗಿ, ಕೊನೆಗೂ ಸ್ವತಂತ್ರವಾದ ರಾಜ್ಯವಾಗಿ ಗುರುತಿಸಿಕೊಂಡಿತು. ಕ್ರಿ.ಶ.ಸು.೧೩೪೬ರಲ್ಲಿ ದೌಲತಾಬಾದದಲ್ಲಿ ತುಘಲಕ್ ದೊರೆಯ ಆಡಳಿತಕ್ಕೆ ಬೇಸತ್ತು ಜನ ದಂಗೆ ಎದ್ದರು. ದಂಗೆಯ ಮುಖ್ಯಸ್ಥನಾಗಿ ಹಸನ್ ಅಲ್ಲಾವುದ್ದೀನ್ ಬಹಮನ ಶಹನಿದ್ದನು. ಇವನಿಗೆ 'ಹಸನ್‌ಗಂಗು' ಎನ್ನುವ ಇನ್ನೊಂದು ಹೆಸರು ಇತ್ತು. ಇವನು ತುಘಲಕ್ ದೊರೆಗಳನ್ನು ಸೋಲಿಸಿ ಕ್ರಿ.ಶ.೧೩೪೭ರಲ್ಲಿ ಬಹಮನಿ ರಾಜ್ಯವನ್ನು ಸ್ಥಾಪಿಸಿದನು. ಸರದಾರರ ಪ್ರಾಬಲ್ಯವನ್ನು ಹತ್ತಿಕ್ಕಿ, ಕಲಬುರ್ಗಿಯನ್ನು, ತನ್ನ ರಾಜಧಾನಿಯಾಗಿ ಮಾಡಿಕೊಂಡು 'ಸಿಕಂದರ ಈ ಸಾನಿ ಅಲ್ಲಾವುದ್ದೀನ್ ಹಸನ್ ಬಹಮನ್‌ಶಹಾ ಅಲ್ ವಾಲಿ' ಎಂಬ ಬಿರುದನ್ನಿಟ್ಟುಕೊಂಡು ರಾಜ್ಯಭಾರ ಮಾಡಿದನು. ಇವನ ತರುವಾಯ ಇವನ ಹಿರಿಯ ಮಗ ಮಹಮ್ಮದ್‌ಶಹ ನಂತರ ಫಿರೋಜ್‌ಶಹ ಪಟ್ಟಕ್ಕೆ ಬಂದರು. ಫಿರೋಜ್‌ಶಹ ಬಹಮನಿಯ ಅರಸರಲ್ಲಿಯೇ ಹೆಸರುವಾಸಿಯಾದನು. ಖಾಜಾಬಂದೇನವಾಜರು ಇವನ ಸಮಕಾಲೀನರಾಗಿ ಕಲಬುರ್ಗಿಯಲ್ಲಿ ಬಾಳಿದ್ದರು. ೨೫ ವರ್ಷಗಳ ಕಾಲ ಆಳ್ವಿಕೆ ಮಾಡಿದ ಫಿರೋಜ್‌ಶಹ ವಿಜಯನಗರ ಅರಸರ ಮೇಲೆ ಮೂರು ಬಾರಿ ದಂಡೆತ್ತಿ ಹೋದನು. ಇವರ ತರುವಾಯ ಪಟ್ಟಕ್ಕೆ ಅಹಮ್ಮದ್‌ಶಾಹ ಬಂದನು. ಬಹಮನಿ ಅರಸರಲ್ಲಿ ಹತ್ತನೆಯವನಾದ ಅಹಮ್ಮದ್‌ಶಹವಾಲಿಯು ತನ್ನ ರಾಜಧಾನಿಯನ್ನು ಬೀದರಿಗೆ ವರ್ಗಾಯಿಸಿದನು. ನಂತರ ಮೊಘಲರ ಆಳ್ವಿಕೆ ಪ್ರಾರಂಭವಾಗಿ ಕ್ರಿ.ಶ.೧೬೫೬ರಲ್ಲಿ ಔರಂಗಜೇಬನು ಬೀದರ ನಗರಕ್ಕೆ ಮುತ್ತಿಗೆ ಹಾಕಿ ಬಹಮನಿಯ ಎಲ್ಲಾ ಪ್ರದೇಶ ವಶಪಡಿಸಿಕೊಂಡು ದಕ್ಷಿಣ ಭಾರತವನ್ನೇ ಸ್ವಾಧೀನಪಡಿಸಿಕೊಂಡನು. ಇವನು ತನ್ನ ದಂಡನಾಯಕನಾದ ನಿಜಾಮ-ಉಲ್-ಮುಲ್ಕ್, ಅಸಫ್‌ಜಹಾನನ್ನು ಕ್ರಿ.ಶ.೧೭೧೩ರಲ್ಲಿ ದಕ್ಷಿಣ ಸುಬೇದಾರನಾಗಿ ನೇಮಿಸಿದನು.

ಮೊಗಲ್ ಚಕ್ರವರ್ತಿ ಔರಂಗಜೇಬನ ಮರಣದ ನಂತರ ಮೊಗಲ್ ಸಾಮ್ರಾಜ್ಯದ ಪತನ ಆರಂಭಗೊಂಡಿತು. ಪ್ರಬಲ ಸಾಮ್ರಾಜ್ಯವೊಂದು ಪತನಗೊಂಡಾಗ ಚಿಕ್ಕಪುಟ್ಟ ಸಂಸ್ಥಾನಗಳು ಹುಟ್ಟಿಕೊಳ್ಳು

ವುದು ಸಹಜ. ಹೀಗೆ ಅಸ್ತಿತ್ವಕ್ಕೆ ಬಂದ ರಾಜ್ಯಗಳಲ್ಲಿ ಹೈದರಾಬಾದಿನ ಆಸಫಿಯಾ ರಾಜವಂಶವು ಪ್ರಮುಖವಾದುದು. ಈ ರಾಜವಂಶ ಕ್ರಿ.ಶ.೧೭೨೪ರಿಂದ ಕ್ರಿ.ಶ.೧೯೪೮ರವರೆಗೆ ಸುಮಾರು ಎರಡು ಶತಮಾನಗಳ ಕಾಲ ರಾಜ್ಯಭಾರ ನಿರ್ವಹಿಸಿತು. ಈ ರಾಜವಂಶದ ನಿಜಾಮರು ತಮ್ಮನ್ನು ಮೊಗಲರ ಉತ್ತರಾಧಿಕಾರಿಗಳೆಂದೇ ಕರೆದುಕೊಂಡಿದ್ದರು. ಹೈದರಾಬಾದ್ ರಾಜ್ಯವು ಒಟ್ಟು ಏಳು ನಿಜಾಮರ ಆಳ್ವಿಕೆಗೆ ಒಳಪಟ್ಟಿತ್ತು. ಇವರ ಆಳ್ವಿಕೆ ಕಾಲದಲ್ಲಿ ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮಾಡಿದ ಪ್ರಗತಿಯಿಂದ ಹೈದರಾಬಾದಿನ ಸಂಸ್ಥಾನದ ಚರಿತ್ರೆಯ ಚಿತ್ರಣ ಈ ಕೆಳಗಿನಂತಿದೆ.

೧೭೨೪ರಿಂದ ಸೆಪ್ಟೆಂಬರ್ ೧೩, ೧೯೪೮ರ ಪೊಲೀಸ್ ಕಾರ್ಯಾಚರಣೆಯವರೆಗೆ ಹೈದರಾಬಾದ್ ಸಂಸ್ಥಾನವನ್ನು ಆಳಿದ ಏಳು ನಿಜಾಮರ ವಿವರ ಹೀಗಿದೆ.

೧. ಮಿರ್ ಖಮರುದ್ದಿನ್ ಬಿನ್ ಕಿಲೀಚಖಾನ್
೨. ನವಾಬ್ ನಿಜಾಮ ಅಲಿಖಾನ್
೩. ನವಾಬ್ ಸಿಕಂದರ್ ಬಹದ್ದೂರ್
೪. ನಾಸಿರುದ್ದೌಲ್ ಬಹದ್ದೂರ್
೫. ಅಫಜುಲುದ್ದೌಲ್ ಬಹದ್ದೂರ್
೬. ಮೀರ್ ಮೆಹಬೂಬ್ ಅಲಿ
೭. ಮೀರ್ ಉಸ್ಮಾನ್ ಅಲಿಖಾನ್

### ೧. ಮಿರ್ ಕಮುರುದ್ದೀನ್ ಬಿನ್ ಕಿಲೀಚಖಾನ್: ೧೭೨೪-೧೭೪೮

ಹೈದರಾಬಾದ್ ಸಂಸ್ಥಾನವನ್ನು ಮಿರ್ ಕಮುರುದ್ದೀನ ಬಿನ್ ಕಿಲೀಚಖಾನ್ ಎಂಬುವನು ಸ್ಥಾಪಿಸಿದನು. ಇವನು ಔರಂಗಜೇಬನ ಸೇನಾಪತಿಯಾಗಿದ್ದ ಖಾಜಿ ಉದ್ದೀನಖಾನ್ ಫರೋಜ್ ಜಂಗ್ ಮಗನಾಗಿದ್ದ ಫಿರೋಜ್ ಜಂಗ್‌ನು ಮೊದಲ ಖಲೀಫ್ ಅಬುಬಕರನ ವಂಶಸ್ಥ ಎಂಬಾ ಪ್ರತೀತಿ ಇತ್ತು. ಔರಂಗಜೇಬನ ಮರಣಕ್ಕೆ ೬ ವರ್ಷ ಮೊದಲು ಅಂದರೆ ೧೭೧೩ರಲ್ಲಿ ಫರೂಕ್‌ಶಿಯಾರ್ ಮಿರ್ ಖಮರುದ್ದಿನ್‌ನನ್ನು ನಿಜಾಮ್-ಉಲ್-ಮುಲ್ಕ್ ಪಿರೋಜ್ ಜಂಗ್ ಎಂಬ ಬಿರುದಿನೊಂದಿಗೆ ದಖ್ಖನ್‌ನ ಸುಬೇದಾರ್‌ನನ್ನಾಗಿ ನೇಮಿಸಿದ್ದ.[೧] ದಕ್ಷಿಣದ ಸುಬೇದಾರನಾಗಿ ಅಧಿಕಾರ ವಹಿಸಿಕೊಳ್ಳಲು ನಿಜಾಮ್-ಉಲ್-ಮುಲ್ಕನು ಔರಂಗಬಾದ್‌ಗೆ ಬರುತ್ತಿದಾಗ ಮಾರ್ಗಮಧ್ಯ ಎಲಿಚಪುರದಲ್ಲಿ ಬೀಡುಬಿಟ್ಟನು. ಆಗ ಅಲ್ಲಿ ಪೀರ್ ಇನಾಯತ್‌ಶಹನೆಂಬ ಮುಸ್ಲಿಂ ಸಂತ ವಾಸವಾಗಿದ್ದನು. ನಿಜಾಮ್-ಉಲ್-ಮುಲ್ಕನು ಆ ಸಂತನ ಬಳಿ ತೆರಳಿ ಗೌರವ ಅರ್ಪಿಸಿದನು. ಸಂತನು ಅವನಿಗೆ ಹಳದಿ ಬಟ್ಟೆಯ ಗಂಟೊಂದನ್ನು 'ನಜರ್' ಆಗಿ ಅರ್ಪಿಸಿದನು. ಅದರಲ್ಲಿ ಏಳು ರೊಟ್ಟಿಗಳಿದ್ದವು. ಇದರ ಅರ್ಥವನ್ನು ತಿಳಿಯಬಯಸಿದಾಗ ಅವನ ಸಂತತಿಯ ಏಳು ಜನ ನಿಜಾಮರು ರಾಜ್ಯವಾಳುವರೆಂದು ಸಂತನು ಭವಿಷ್ಯವಾಣಿ ನುಡಿದನು. ಸ್ಥಾಪಕ ನಿಜಾಮ್-

ಉಲ್-ಮುಲ್ಕನಿಂದ ಮೊದಲುಗೊಂಡು ಕೊನೆಯ ನಿಜಾಮ್ ಮೀರ್ ಉಸ್ಮಾನ್ ಅಲೀಖಾನ್ ರವರೆಗೆ ಒಟ್ಟು ಏಳು ಜನ ನಿಜಾಮರು ಹೈದರಾಬಾದ್ ಸಂಸ್ಥಾನವನ್ನಾಳಿದರು. ಸಂತನ ಭವಿಷ್ಯವಾಣಿ ನಿಜವಾಯಿತು![೨]

ರಾಜಕೀಯ ಮುತ್ಸದ್ದಿಯಾಗಿದ್ದ ನಿಜಾಮ-ಉಲ್-ಮುಲ್ಕ್ ಪತನದ ಅಂಚಿನಲ್ಲಿದ್ದ ಮೊಗಲ್ ಸಾಮ್ರಾಜ್ಯದ ರಾಜಕೀಯ ಭವಿಷ್ಯವನ್ನು ಮುಂದಾಗಿಯೇ ಊಹಿಸಿದನು. ಹೀಗಾಗಿ ದಿಲ್ಲಿಯಿಂದ ದೂರದ ದಕ್ಷಿಣಕ್ಕೆ ತೆರಳುವುದೇ ಈ ಮಹತ್ವಾಕಾಂಕ್ಷಿಗೆ ಯೋಗ್ಯವೆನಿಸಿತ್ತು.[೩]

ನಿಜಾಮ್-ಉಲ್-ಮುಲ್ಕ್ ಔರಂಗಜೇಬನ ನಿಧನವಾದ ತರುವಾಯ ೧೭೧೩ರಲ್ಲಿ ದಖನ್ನಿನ ಸುಬೇದಾರನಾಗಿ ನೇಮಕಗೊಂಡ ಮೇಲೆ ದಕ್ಷಿಣ ಭಾಗದ ಆಡಳಿತ ಹತೋಟಿಯಲ್ಲಿ ಹಲವು ಪರಿವರ್ತನೆಗಳು ಗೋಚರವಾದವು. ಇವನನ್ನು ೧೯೧೯ರಲ್ಲಿ ಮಾಳ್ವದ ಸುಬೇದಾರನಾಗಿ ನೇಮಕ ಮಾಡಲಾಯಿತು. ಆದರೆ ಸೈಯದ್ ಸಹೋದರರಿಗೆ ದೆಹಲಿಯ ದರ್ಬಾರಿನಲ್ಲಿ ಪ್ರಭಾವವಿದ್ದ ಕಾರಣ ಸಯ್ಯದ್ ದಿಲಾವರ್‌ನನ್ನು ಸುಬೇದಾರನಾಗಿ ನೇಮಕ ಮಾಡಿಕೊಂಡರೆಂದು ವ್ಯಕ್ತವಾಗುತ್ತದೆ. ಇದೇ ಸಮಯದಲ್ಲಿ ಜಾಹಿಗೆ ಬದಲಾಗಿ ಬಂದಿದ್ದ ದಖನ್ನಿನ ಸುಬೇದಾರನಿಗೆ ನಿಜಾಮ್-ಉಲ್-ಮುಲ್ಕನ ಮೇಲೆ ದಾಳಿ ಮಾಡಿ ಉತ್ತರ ಭಾರತಕ್ಕೆ ಹಿಮ್ಮೆಟ್ಟಿಸಲು ದೆಹಲಿ ದರ್ಬಾರ್ ಆಜ್ಞೆ ಹೊರಡಿಸಿತು. ಈ ತಂತ್ರದ ದುರಾಲೋಚನೆಯನ್ನು ಅರಿತುಕೊಂಡ ನಿಜಾಮನು ೧೭೨೦ರಲ್ಲಿ ದಿಲಾವರ್‌ನನ್ನು ರತನಪುರ ಯುದ್ಧದಲ್ಲಿ ಪರಾಭವಗೊಳಿಸಿದನು. ಅನಂತರ ಇವನು ವಿಜಾಪುರವನ್ನು ಪ್ರವೇಶಿಸಿ ದಖನ್ನಿನ ಸುಬೇದಾರನನ್ನು ಸೋಲಿಸಿದನು. ದೆಹಲಿಯಲ್ಲೂ ಈ ಸಮಯಕ್ಕೆ ಸೈಯದ್ ಸಹೋದರರ ಪ್ರಭಾವವೂ ಕುಂಠಿತವಾಗಿತ್ತು. ನಿಜಾಮ್-ಉಲ್-ಮುಲ್ಕನನ್ನು ದೆಹಲಿಯಲ್ಲಿ ವಜೀರ್ ಆಗಿ ನೇಮಕ ಮಾಡಲಾಯಿತು. ಆದರೆ ಆತನಿಗೆ ಆ ಹುದ್ದೆಯಲ್ಲಿ ಆಸಕ್ತಿ ಇಲ್ಲದಿದ್ದ ಕಾರಣ ಅದಕ್ಕೆ ರಾಜೀನಾಮೆ ನೀಡಿ ಸ್ವತಂತ್ರವಾಗಿ ದಖನ್ನಿಗೆ ೧೭೨೪ರಲ್ಲಿ ಹಿಂದಿರುಗಿದನು. ವಾಪಸ್ ಬಂದ ಕೆಲವೇ ಸಮಯದಲ್ಲಿ ಮುಖಾರಿಜ್ ಖಾನ್‌ನನ್ನು ದಖನ್ನಿನಲ್ಲಿ ಸುಬೇದಾರನ್ನಾಗಿ ನೇಮಿಸಿ[೪] ದಕ್ಷಿಣದ ಮೊಗಲ್ ಪ್ರಾಂತ್ಯಗಳನ್ನು ಆತನ ಹತೋಟಿಗೆ ನೀಡಿದನು. ನಿಜಾಮನು ಕ್ರಮವಾಗಿ ಮುಂದುವರೆದು ಅಕ್ಟೋಬರ್ ೧೭೨೪ರಲ್ಲಿ ಹೈದರಾಬಾದ್‌ನ್ನು ತನ್ನ ವಶಕ್ಕೆ ತೆಗೆದುಕೊಂಡು ಅಲ್ಲಿಯೇ ನೆಲೆಸಿದನು. ಹೈದರಾಬಾದ್‌ಗೆ ಬಂದು ತನ್ನ ಸ್ವಾತಂತ್ರ್ಯವನ್ನು ಕಾಪಾಡಿಕೊಂಡು ನಿಜಾಮ-ಉಲ್-ಮುಲ್ಕನು ತನ್ನ ಸ್ವಾಯತ್ತ ಆಡಳಿತವನ್ನು ಕ್ರಮವಾಗಿ ಬಲಪಡಿಸಿಕೊಂಡನೆಂದು ತಿಳಿದುಬರುತ್ತದೆ.[೫]

ಕ್ರಿ.ಶ.೧೭೨೪ರಲ್ಲಿ ಮೂಸಿ ನದಿಯ ಬಳಿಯಲ್ಲಿದ್ದ ಹೈದರಾಬಾದ್ ನಗರವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಪರ್ಷಿಯನ್ ಭಾಷೆಯಲ್ಲಿ ಅಪಾರ ಪಾಂಡಿತ್ಯವನ್ನು ಹೊಂದಿದ್ದ ಇವನು ಕವನಗಳನ್ನು ಕೂಡ ರಚಿಸಿದ್ದನು. ಟರ್ಕಿ ಭಾಷೆಯಲ್ಲಿ ಸಂಭಾಷಿಸುತ್ತಿದ್ದನು. ಬಹಳ ಕಷ್ಟದಿಂದ, ಅನೇಕ ಯುದ್ಧಗಳನ್ನು ಮಾಡಿ ಉತ್ತರದ ತಪತಿ ನದಿಯಿಂದ ದಕ್ಷಿಣದ ಕರ್ನಾಟಕದ ಗಡಿಯವರೆಗೆ ರಾಜ್ಯವನ್ನು ವಿಸ್ತರಿಸಿದನು.[೬]

ದೆಹಲಿಯಲ್ಲಿಯೂ ಈ ಸಂದರ್ಭದಲ್ಲಿ ಸಿಂಹಾಸನಕ್ಕಾಗಿ ಅಸ್ಥಿರತೆಯ ಕಲಹಗಳು ಪ್ರಾರಂಭವಾದುದರಿಂದ ಈತನ ರಾಜ್ಯದ ಪ್ರಗತಿಗೆ ಯಾವುದೇ ರೀತಿಯ ಅಡೆತಡೆಗಳೂ ಉಂಟಾಗಲಿಲ್ಲ. ಆದರೆ ಆತನಿಗಿದ್ದ ಒಂದು ಪ್ರಬಲ ವಿರೋಧವೆಂದರೆ ಮರಾಠರು ಅನುಸರಿಸಿದ ವಿಸ್ತರಣಾ ನೀತಿಯೇ ಆಗಿತ್ತು. ಆತನು ತನ್ನ ರಾಜ್ಯ ನಿರ್ಬಂಧ ನೀತಿಯಿಂದ ಸುಲಭವಾಗಿ ಮರಾಠರನ್ನು ಹತೋಟಿಯಲ್ಲಿಟ್ಟಿದ್ದನು. ನಿಜಾಮ್-ಉಲ್-ಮುಲ್ಕ ಮರಣ ಹೊಂದುವ ವೇಳೆಗೆ ದಖನ್ನಿನಲ್ಲಿ ತನ್ನ ಸಾಮ್ರಾಜ್ಯದ ಆಳ್ವಿಕೆಯನ್ನು ಸುಭದ್ರಗೊಳಿಸಿಕೊಂಡನು. ಇವನ ಜೀವಿತ ಸಮಯದಲ್ಲಿ ಮರಾಠರು ಇವನಿಂದ ಚೌತ ತೆರಿಗೆಯನ್ನು ವಸೂಲು ಮಾಡುತ್ತಿದ್ದರೆಂದು ವ್ಯಕ್ತವಾಗುತ್ತದೆ. ನಿಜಾಮ್-ಉಲ್-ಮುಲ್ಕನು ನಿಧನನಾದ ಮೇಲೆ ಹೈದರಾಬಾದಿನಲ್ಲಿ ನಾಸಿರ್‌ಜಂಗ್ ಮತ್ತು ಅಕ್ಕನ ಮಗ ಮುಜಾಫರ್ ಜಂಗ್ ಇಬ್ಬರ ನಡುವೆ ಸಿಂಹಾಸನಕ್ಕಾಗಿ ಕಲಹ ಆರಂಭವಾಯಿತು. ಈ ವೇಳೆಗಾಗಲೇ ದಕ್ಷಿಣ ಭಾರತದಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿಕೊಂಡಿದ್ದ ಫ್ರೆಂಚರು ಮತ್ತು ಬ್ರಿಟಿಷರು ಈ ಸಿಂಹಾಸನ ಕಲಹದಲ್ಲಿ ಪರವಿರೋಧ ಪಕ್ಷವನ್ನು ವಹಿಸಿ ಪ್ರವೇಶ ಮಾಡಿದ್ದವು.[೭] ಆದರೆ ಮೂರನೆಯ ಮಗ ಸಲಾಬತ್ ಜಂಗನು ಡೂಪ್ಲೆಯ ಸಹಾಯದಿಂದ ೧೭೫೧ರಲ್ಲಿ ಗದ್ದುಗೆ ಏರಿ ೧೭೬೨ರವರೆಗೆ ರಾಜ್ಯವಾಳಿದ್ದನು. ಈ ಅವಧಿಯಲ್ಲಿ ಹೈದರಾಬಾದ್ ಫ್ರೆಂಚರ ಪ್ರಭಾವಕ್ಕೆ ಒಳಗಾಗಿತ್ತು.[೮]

### ೨. ನವಾಬ್ ನಿಜಾಮ್ ಅಲೀಖಾನ್: ೧೭೬೧-೧೮೦೩

ಮೀರ್ ನಿಜಾಂ ಅಲೀಖಾನ್ ಎರಡನೆಯ ಅಸಫ್‌ಜಹಾ ಹುಟ್ಟು ರಾಜಕೀಯ ಮುತ್ಸದ್ದಿ. ಹೈದರಾಬಾದ್ ಸಂಸ್ಥಾನದಲ್ಲಿ ಫ್ರೆಂಚರ ಪ್ರಬಾವ ಹೆಚ್ಚಿದರೂ ಬ್ರಿಟಿಶರು ಭಾರತದಲ್ಲಿ ಬಲಗೊಳ್ಳುತ್ತಿದ್ದುದನ್ನು ಗಮನಿಸಿದ್ದನು. ಹೀಗಾಗಿ ಬ್ರಿಟಿಶ್ ಈಸ್ಟ್ ಇಂಡಿಯಾ ಕಂಪನಿಯೊಂದಿಗೆ ಒಪ್ಪಂದಗಳನ್ನು ಮಾಡಿಕೊಂಡನು.[೯] ಈತನಿಗೆ ತನ್ನದೇಯಾದಂಥ ಒಂದು ನೀತಿಯೆಂಬುದು ಇರಲಿಲ್ಲ. ತನ್ನ ಅಧಿಕಾರವನ್ನು ಉಳಿಸಿಕೊಳ್ಳಲು ಸಮಯಸಾಧಕನಂತೆ ಬಲ ಇದ್ದವರ ಕಡೆಗೆ ವಾಲುತ್ತಿದ್ದನು. ಇಂಗ್ಲಿಷರ ಸಹಾಯದಿಂದಲೇ ಪಟ್ಟಕ್ಕೆ ಬಂದಿದ್ದನಾದರೂ ಫ್ರೆಂಚರ ಬಲ ಹೆಚ್ಚುತ್ತಿರುವುದು ಕಂಡರೆ ಫ್ರೆಂಚರ ಕಡೆಗೆ, ಇಂಗ್ಲಿಷರು ಮೇಲುಗೈ ಸಾಧಿಸುತ್ತಿದ್ದರೆ ಇಂಗ್ಲಿಷರ ಕಡೆಗೆ ವಾಲುತ್ತಿದ್ದನು. ಆದರೆ ತನ್ನ ಧೂರ್ತತನದಿಂದ ಇಂಗ್ಲಿಷರ ಕಣ್ಣಿಗೆ ಮಣ್ಣೆರಚಲು ಸಾಧ್ಯವಾಗಲಿಲ್ಲ. ಕ್ರಿ.ಶ.೧೭೯೮-೧೮೦೦ರ ಸುಮಾರಿಗೆ ಇಂಗ್ಲಿಷರು ಹಂತ ಹಂತವಾಗಿ ಈತನ ಬಾಲ ಕತ್ತರಿಸುತ್ತ ಬಂದರು. ಕ್ರಿ.ಶ.೧೮೦೦ರಲ್ಲಿ ಈತನನ್ನು ಸಂಪೂರ್ಣವಾಗಿ ತಮ್ಮ ಕೈಗೊಂಬೆ ಯನ್ನಾಗಿ ಮಾಡಿಕೊಂಡರು. ಆ ದಿನದಿಂದ ನಿಜಾಮ ರಾಜ್ಯವು ಸಂರಕ್ಷಿತ ರಾಜ್ಯವಾಯಿತು.[೧೦] ಕ್ರಿ.ಶ.೧೭೯೮ ಸಹಾಯಕ ಸೈನ್ಯಪದ್ಧತಿಗೆ ಹೈದರಾಬಾದ್ ಸಂಸ್ಥಾನ ಒಳಪಟ್ಟಿತು. ಮಿ.ಹಾಲೆಮಡ್ ಮೊದಲನೆಯ ಬ್ರಿಟಿಶ್ ರೆಸಿಡೆಂಟನಾದನು. ಮರಾಠರು ಇಲ್ಲವೇ ಮೈಸೂರಿನ ಟಿಪ್ಪುಸುಲ್ತಾನ್ ಹೈದರಾಬಾದಿನ ಮೇಲೆ ದಾಳಿ ಮಾಡಿದರೆ ಬ್ರಿಟಿಶ್ ಸೈನ್ಯವನ್ನು ಅವರ ಒಪ್ಪಿಗೆ ಪಡೆದು ಹೈದರಾಬಾದ್ ಸಂಸ್ಥಾನ ಬಳಸಿಕೊಳ್ಳಬಹುದಿತ್ತು.

ಇಲ್ಲಿಗೆ ಸಂಸ್ಥಾನದ ಮೇಲಿದ್ದ ಫ್ರೆಂಚರ ಪ್ರಭಾವ ಪೂರ್ತಿ ಕಣ್ಮರೆಯಾಯಿತು. ಸಹಾಯಕ ಸೈನ್ಯಪದ್ಧತಿ ಒಪ್ಪಂದದ ಮೇರೆಗೆ ಇಂಗ್ಲಿಷರು ನಿಜಾಮನನ್ನು ಸಾಧ್ಯವಾದಷ್ಟು ತಮ್ಮ ಹಿಡಿತದಲ್ಲಿಟ್ಟುಕೊಂಡರು. ಈ ಕ್ರಮ ಕೊನೆಯ ನಿಜಾಮವರೆಗೂ ನಡೆದುಕೊಂಡು ಬಂದಿತು. ನಿಜಾಮರ ಖರ್ಚು ವೆಚ್ಚ ನಿರ್ಧರಿಸುವ ಕೆಲಸವನ್ನು ಇಂಗ್ಲಿಷರೇ ಮಾಡುತ್ತಿದ್ದರು. ನಿಜಾಮ್ ಆಲೀಖಾನ್ ಕ್ರಿ.ಶ.೧೮೦೩ರಲ್ಲಿ ಮರಣ ಹೊಂದಿದ್ದನು.[೧೧]

## ೩. ನಿಜಾಮ ಸಿಕಂದರ್ ಬಹದ್ದೂರ್: ೧೮೦೪-೧೮೨೮

ಮೀರ್ ನಿಜಾಂ ಅಲೀಖಾನ್ ಅವನ ಹಿರಿಯ ಮಗ ಸಿಕಂದರ್ ಬಹದ್ದೂರ್ ಪಟ್ಟಕ್ಕೆ ಬಂದನು. ಸಿಕಂದರ್ ಬಹದ್ದೂರ್‌ನು ವಿಷಯಲೋಲುಪನಾಗಿದ್ದ ಕಾರಣ ಆಡಳಿತವನ್ನು ಅವನ ಪ್ರಧಾನಮಂತ್ರಿಯಾದ ರಾಜಚಂದೂಲಾಲ್ ನಿರ್ವಹಿಸಿದ್ದನು.[೧೨] ಪ್ರಧಾನಿಯ ಆಡಳಿತದಲ್ಲಿ ಹೈದರಾಬಾದ್ ಸಂಸ್ಥಾನದ ಆರ್ಥಿಕ ಪರಿಸ್ಥಿತಿ ಸಂಪೂರ್ಣ ಹದಗೆಟ್ಟಿತ್ತು. ಆಡಳಿತದ ವೆಚ್ಚಕ್ಕೂ ಹಣದ ಕೊರತೆ ಕಂಡುಬಂದಿತು. ಖಜಾನೆಯಲ್ಲಿ ಹಣ ಕೂಡಿಸಲು ಜಿಲ್ಲೆಗಳ ಅಧಿಕಾರವನ್ನು ಒಂದು ಅರ್ಥದಲ್ಲಿ ಹರಾಜು ಹಾಕಲಾಯಿತು. ಹೆಚ್ಚು ಹಣ ಕೊಟ್ಟವರಿಗೆ ಜಿಲ್ಲೆಯ ಆಡಳಿತಗಾರರಾಗುವ ಅವಕಾಶ ಲಭ್ಯವಿತ್ತು.

ಪ್ರಧಾನಿ ಚಂದೂಲಾಲ್‌ನ ಅಸಮರ್ಪಕ ಮತ್ತು ಅವಿವೇಕದ ಆರ್ಥಿಕ ನಿರ್ವಹಣೆಯಿಂದ ಹೈದರಾಬಾದ್ ಸಂಸ್ಥಾನದ ಬೊಕ್ಕಸ ಒಂದಾಗಿ ಹಣಕಾಸಿನ ತೀವ್ರ ಮುಗ್ಗಟ್ಟು ಕಾಣಿಸಿಕೊಂಡಿತು. ವೆಚ್ಚವನ್ನು ನಿಭಾಯಿಸಲು ವಿಲಿಯಂ ಪಾಲ್ಮೇರ್ ಸಂಸ್ಥೆಯಿಂದ ಚಂದೂಲಾಲ್ ರೂ.೬೦ ಲಕ್ಷ ಸಾಲ ಪಡೆದನು. ಪ್ರತಿಯಾಗಿ ರೂ.೮ ಲಕ್ಷ ಕಮೀಶನ್ ಹಾಗೂ ಶೇಕಡಾ ರೂ.೧೮ ಬಡ್ಡಿಯನ್ನು ಕೊಡಲು ಒಪ್ಪಲಾಯಿತು. ಹೀಗೆ ಸಾಲ ಪಡೆದ ಹಣದಿಂದ ಸಹಾಯಕ ಸೈನ್ಯಪದ್ಧತಿಯ ಬಾಕಿಗಳನ್ನು ತೀರಿಸಲಾಯಿತು. ಈ ದೊಡ್ಡ ಮೊತ್ತದ ಸಾಲದ ಪರಿಣಾಮವಾಗಿ ಸಂಸ್ಥಾನದ ಸಂಕಟಗಳೇನೋ ತಾತ್ಕಲಿಕವಾಗಿ ಪರಿಹಾರಗೊಂಡವು. ಆದರೆ ಸಾಲ ನೀಡಿದ ವಿಲಿಯಂ ಪಾಲ್ಮೇರ್ ಸಂಸ್ಥಾನದ ರಾಜಕೀಯದಲ್ಲಿ ಅನಗತ್ಯವಾಗಿ ಹಸ್ತಕ್ಷೇಪ ಮಾಡತೊಡಗಿದನು. ಇದನ್ನು ಸಹಿಸದ ಬ್ರಿಟಿಶ್ ಸರ್ಕಾರ ಸಂಸ್ಥಾನದ ಮೇಲೆ ತನ್ನ ಹಿಡಿತ ಮತ್ತು ಪ್ರಭಾವಗಳನ್ನು ಬಲಪಡಿಸಿಕೊಳ್ಳಲು ವಿಲಿಯಂ ಪಾಲ್ಮೇರ್ ಸಂಸ್ಥೆಯ ಸಾಲವನ್ನು ತಾನೇ ತೀರಿಸಿತು. ೧೮೪೩ರಲ್ಲಿ ಚಂದೂಲಾಲ್‌ರಿಂದ ಬಲವಂತವಾಗಿ ರಾಜೀನಾಮೆಯನ್ನು ಪಡೆಯಲಾಯಿತು. ಈ ಘಟನೆಯಿಂದ ಸಿಕಂದರ್ ಬಹದ್ದೂರ್ ಎಚ್ಚೆತ್ತುಕೊಂಡನು.[೧೩]

## ೪. ನಿಜಾಮ್ ನಾಸಿರುದ್ದೌಲ್ ಬಹದ್ದೂರ್: ೧೮೨೯-೧೮೫೭

ನಿಜಾಮ ಸಿಕಂದರ್ ಬಹದ್ದೂರ್ ಅವನ ಮಗನಾದ ನಾಸಿರುದ್ದೌಲ್ ಬಹದ್ದೂರ್ ಪಟ್ಟಕ್ಕೆ ಬಂದನು. ಸಿಕಂದರ್ ವಿಶಾಲ ಮನೋಭಾವದ ನಿಜಾಮನಾಗಿ ಒಳ್ಳೆಯ ಜನಪ್ರಿಯತೆ ಗಳಿಸಿದನು.

ಆಡಳಿತದಲ್ಲಿ ಸಹಾಯಕನಾಗಿದ್ದ ಪ್ರಧಾನಮಂತ್ರಿ ಮೊದಲನೆಯ ಸಾಲಾರ್‌ಜಂಗನು ಹೊಸ ಹೊಸ ಯೋಜನೆಗಳನ್ನು ಜಾರಿಗೆ ತರುತ್ತಾ ಸಂಸ್ಥಾನದ ಅಭಿವೃದ್ಧಿಗೆ ಪ್ರಯತ್ನಿಸಿ ಸಿಕಂದರ್ ಬಹದ್ದೂರ್‌ನ ಪ್ರೀತಿಗೆ ಪಾತ್ರನಾಗಿದ್ದನು. ಇದೇ ಸಮಯದಲ್ಲಿ ನಿಜಾಮನು ಬ್ರಿಟಿಶರೊಡನೆ ನಿರಂತರ ಮೈತ್ರಿಯನ್ನು ಕಾಪಾಡಿಕೊಳ್ಳುವ ಸಲುವಾಗಿ ಹೊಸ ಕರಾರಿಗೆ ಸಹಿ ಹಾಕಿದನು. ಇದಕ್ಕೆ ಪ್ರತಿಯಾಗಿ ಬ್ರಿಟಿಶರು ನಿಜಾಮನನ್ನು ಕೇವಲ ಯುದ್ಧ ಸಮಯದ ಸೈನಿಕ ಪ್ರತಿನಿಧಿ ಎಂಬ ನಿರ್ಬಂಧವನ್ನು ತೆಗೆದು ತಮ್ಮದೇ ಸೈನಿಕ ತುಕಡಿಯನ್ನು ನಿಜಾಮನ ನೆರವಿಗೆ ನೆಲೆಗೊಳಿಸಿದರು ಹಾಗೂ ಈ ಮೈತ್ರಿಕೂಟವು ಆತ್ಮೀಯವಾಗುವಂಥ ಪರಿಸ್ಥಿತಿಯನ್ನು ನಿರ್ಮಿಸಿದರು.[೧೪]

ನಿಜಾಮ ನಾಸಿರುದ್ದೌಲನ ಪ್ರಾರಂಭದ ದಿನಗಳನ್ನು ಬಿಟ್ಟರೆ ೧೮೨೯ರಿಂದಲೂ ಬ್ರಿಟಿಶರ ಜೊತೆ ಸೌಹಾರ್ದಯುತ ರಾಜಕೀಯ, ಆರ್ಥಿಕ ಸಂಬಂಧವನ್ನು ಕಾಯ್ದುಕೊಂಡಿದ್ದನು. ನಿಜಾಮನು ತನ್ನ ಬಾಹ್ಯ ಸಾರ್ವಭೌಮತ್ವವನ್ನು ಬ್ರಿಟಿಶರಿಗೆ ಒಪ್ಪಿಸಿಬಿಟ್ಟಿದ್ದನು. ನಿಜಾಮನ ಆಸ್ಥಾನದಲ್ಲಿ ಬ್ರಿಟಿಶರ ರೆಸಿಡೆಂಟನು ಚಕ್ರವರ್ತಿಯ ಸೈನ್ಯದ ಮೇಲಧಿಕಾರಿಯಾಗಿದ್ದನು. ದಮನ ಹಾಗೂ ಓಲೈಸುವ ನೀತಿಗೆ ಅನುಗುಣವಾಗಿ ಮರಾಠ ಹಾಗೂ ಮೈಸೂರು ರಾಜಕೀಯ ಶಕ್ತಿಗಳ ಅಧಿಕಾರ ವಿಸ್ತರಿಸಿದಂತೆ ತಮ್ಮ ಆರ್ಥಿಕ ಹಿತಾಸಕ್ತಿ ಮತ್ತು ದಕ್ಷಿಣ ಭಾರತದಲ್ಲಿ ತಮ್ಮ ಪರಮಾಧಿಕಾರವನ್ನು ಕಾಯ್ದುಕೊಳ್ಳಲು ಹೈದರಾಬಾದ್ ಸಂಸ್ಥಾನವನ್ನು ಬ್ರಿಟಿಶರು ಒಂದು ಲಾಭದಾಯಕ ರಾಜ್ಯವನ್ನಾಗಿ ಬಳಸಿದರು. ಈ ಕಾರಣದಿಂದಾಗಿ ಬ್ರಿಟಿಶ್ ಸಾಮ್ರಾಜ್ಯಶಾಹಿ ವಿರುದ್ಧ ಸಿಡಿದೇಳದೆ ಕೊನೆಯವರೆಗೆ ಬ್ರಿಟಿಶರಿಗೆ ವಿಧೇಯನಾಗಿ ಉಳಿದುಕೊಂಡು ಕ್ರಿ.ಶ.೧೮೫೭ರಲ್ಲಿ ಮರಣ ಹೊಂದಿದನು.[೧೫]

## ೫. ನಿಜಾಮ್ ಅಫಜಲುದ್ದೌಲ ಬಹದ್ದೂರ್: ೧೮೫೭-೧೮೬೯

ನಾಲ್ಕನೆಯ ನಿಜಾಮ ನಾಸಿರುದ್ದೌಲನ ಮರಣದ ನಂತರ ಅಫಜಲುದ್ದೌಲ ಬಹದ್ದೂರ್ ಅಧಿಕಾರಕ್ಕೆ ಬಂದನು. ತನ್ನ ತಂದೆಯ ಬ್ರಿಟಿಶ್ ಅನುಯಾಯಿ ತತ್ವಗಳಾದ ರಾಜಕೀಯ ಆರ್ಥಿಕ, ಆಡಳಿತ, ಕಂದಾಯ ಶಿಕ್ಷಣ ೧೮೫೭-೫೮ರಲ್ಲಿ ಸಂಭವಿಸಿದ ಭಾರತದ ಮೊದಲನೆಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬ್ರಿಟಿಶರು ತಲ್ಲಣಿಸುತ್ತಿದ್ದಾಗಲೇ ನಿಜಾಮ ಮತ್ತು ಅವನ ಪ್ರಧಾನಮಂತ್ರಿ ಸಾಲಾರ್‌ಜಂಗ್ ಬ್ರಿಟಿಶರಿಗೆ ಬೆಂಬಲವನ್ನು ಸೂಚಿಸಿದರು. ನಿಜಾಮನ ಈ ಉಪಕಾರಕ್ಕಾಗಿ ಬ್ರಿಟಿಶ ಸರಕಾರ ನಿಜಾಮರೊಂದಿಗೆ ಹೊಸ ಒಪ್ಪಂದವನ್ನು ಮಾಡಿಕೊಂಡು ನಿಜಾಮರಿಂದ ತೆಗೆದುಕೊಂಡಿದ್ದ ಉಸ್ಮಾನಾಬಾದ್ ಮತ್ತು ರಾಯಚೂರು ಪ್ರದೇಶಗಳನ್ನು ನಿಜಾಮರಿಗೆ ಹಿಂದುರಿಗಿಸಿದರು.[೧೬] ೧೮೫೭ರಲ್ಲಿ ಬ್ರಿಟಿಶರ ವಿರುದ್ಧ ನಡೆಯುತ್ತಿರುವ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಯುದ್ಧದಲ್ಲಿ ಹೈದರಾಬಾದ್ ಪಾಲ್ಗೊಳ್ಳದಂತೆ ಸಾಲಾರ್‌ಜಂಗ್ ಜಾಣ್ಮೆಯಿಂದ ಬ್ರಿಟಿಶರ ಪರವಾಗಿ ಪಾಲುಗೊಂಡಿದ್ದರು. ಇಲ್ಲದಿದ್ದರೆ ಬ್ರಿಟಿಶರ ವಿರುದ್ಧ ಯುದ್ಧಕ್ಕೆ ಸಿದ್ಧವಾಗಿದ್ದರೆ ಈ ಸಂಸ್ಥಾನವು

೧೯೪೮ರ ಬದಲು ೧೮೫೭ರಲ್ಲಿಯೇ ಭಾರತದ ಒಕ್ಕೂಟದಲ್ಲಿ ವಿಲೀನವಾಗುತ್ತಿತ್ತು ಎಂದು ಹೈದರಾಬಾದಿನ ಸೇನಾ ದಂಡನಾಯಕ ಎಲ್.ಇಡ್ರೋಸ್ ಅಭಿಪ್ರಾಯ ಪಡುತ್ತಾನೆ.[೧೬]

ಬ್ರಿಟಿಶರ ಆಳ್ವಿಕೆ ಮತ್ತು ದಬ್ಬಾಳಿಕೆಯ ದಾಸ್ಯದಿಂದ ಮುಕ್ತರಾಗಲು ಪೇಶ್ವೆ ನಾನಾಸಾಹೇಬನ ಕರೆಯಂತೆ ಹಮ್ಮಿಗೆ ಕೆಂಚನಗೌಡ, ಮುಂಡರಗಿ ಭೀಮರಾವ್, ಸುರಪುರದ ರಾಜಾ ವೆಂಕಟಪ್ಪನಾಯಕ ಮುಂತಾದವರ ಜೊತೆಗೆ ಏಕಕಾಲದಲ್ಲಿ ಹೈದರಾಬಾದ್, ಮದರಾಸು, ಮೈಸೂರು, ತಿರುವಾಂಕೂರು ಹಾಗೂ ಕೊಚ್ಚಿನ್ ರಾಜ್ಯಗಳಲ್ಲಿ ಸಹ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಒಂದಾಗಿ ಸ್ಪಂದಿಸುತ್ತಿದ್ದರು. ಆದರೆ ನಿಜಾಮನು ಬ್ರಿಟಿಶರೆಂಬ ಅಂಕುಶವನ್ನು ಸಣ್ಣ ಪುಟ್ಟ ಸಂಸ್ಥಾನಗಳನ್ನು ಹತ್ತಿಕ್ಕಲು ಬಳಸುತ್ತಿದ್ದನು. ಇಷ್ಟಾದರೂ ಸಹ ಸುರಪುರ ಮತ್ತು ಹಲಗಲಿಯ ಬೇಡರು ಹಾಗೂ ಇತರ ವೀರರು ವೀರಾವೇಶದಿಂದ ಹೋರಾಡಿ ಬ್ರಿಟಿಶ್ ಸೈನ್ಯದಲ್ಲಿ ಉನ್ನತ ಅಧಿಪತಿಯಾಗಿದ್ದ ಕ್ಯಾಪ್ಟನ್ ನ್ಯೂಬರಿಯನ್ನು ಕೊಂದುಹಾಕಿದರು. ಬ್ರಿಟಿಶ್ ಮತ್ತು ಹೈದರಾಬಾದ್ ನಿಜಾಮ ಒಂದುಗೂಡಿ ದೇಶಭಕ್ತಿ, ಏಕತೆಯಿಂದ ನಡೆಸಿದ ಹೋರಾಟವನ್ನು ದಮನ ಮಾಡಿದರೂ ಸುರಪುರದ ರಾಜಾ ವೆಂಕಟಪ್ಪನಾಯಕನು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿ ಹುತಾತ್ಮನಾದನು. ಅದೇ ರೀತಿಯ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಬೇಕೆಂದು ದಕ್ಷಿಣ ಭಾರತದ ಜನತೆಯ ಅಭಿಲಾಷೆಯು ನಿಜಾಮ ಅಫಜಲದ್ದೌಲ್ ಹಾಗೂ ಬ್ರಿಟಿಶರ ಕೆಟ್ಟ ನೀತಿಯಿಂದ ಈಡೇರಲಿಲ್ಲ.

೧೮೫೭ರಲ್ಲಿ ಬಾಂಬೆ ಪ್ರಾಂತ್ಯದ ಗವರ್ನರ್, ಗವರ್ನರ್ ಜನರಲ್‌ಗೆ ಈ ಸ್ವಾತಂತ್ರ್ಯ ಸಂಗ್ರಾಮದ ಕುರಿತು ಒಂದು ಪತ್ರದಲ್ಲಿ ನಿಜಾಮನು ಕೈಬಿಟ್ಟರೆ ಎಲ್ಲವೂ ಕೈ ಬಿಟ್ಟಂತೆ ಎಂದು ನಿಜಾಮನು ಬ್ರಿಟಿಶರ ಅತ್ಯಂತ ನಿಷ್ಠಾವಂತ ಹಿಂಬಾಲಕನಾಗಿದ್ದುದರಿಂದಲೇ ೧೮೫೭ರ ಸಂಗ್ರಾಮದ ಅಲೆಗಳೂ ದಕ್ಷಿಣ ಭಾರತದಲ್ಲಿ ಸಂಪೂರ್ಣ ಹರಡಲಿಲ್ಲ. ಇದರಿಂದ ಬ್ರಿಟಿಶ್ ರೆಸಿಡೆಂಟ್‌ನು ಸಂತೋಷದಿಂದ ನಿಜಾಮನಿಗೆ ಅಸಫ್‌ಜಹಾ ಧ್ವಜ ಹಾಗೂ ತನ್ನ ರಾಷ್ಟ್ರಗೀತೆಯೊಂದಿಗೆ ಕಂದಾಯ, ಹಣದ ಮುದ್ರಣ, ಪೊಲೀಸ್, ಬ್ಯಾಂಕು, ಸಾರಿಗೆ, ಉದ್ದಿಮೆ ಮುಂತಾದ ಕ್ಷೇತ್ರಗಳಿಗೆ ಪೂರ್ಣ ಅಧಿಕಾರವನ್ನು ನೀಡಿದನು.[೧೮]

### ೬. ಮೀರ್ ಮೆಹಬೂಬ್ ಅಲೀಖಾನ್ ಬಹದ್ದೂರ್: ೧೮೬೯-೧೯೧೧

ಮೆಹಬೂಬ್ ಅಲೀಖಾನ್ ಅಫಜಲದ್ದೌಲನ ಉತ್ತರಾಧಿಕಾರಿಯಾಗಿ ಕೇವಲ ಮೂರು ವರ್ಷದ ಅಪ್ರಾಪ್ತಬಾಲಕ ಪಟ್ಟಕ್ಕೆ ಬಂದನು. ಈ ಸಮಯದಲ್ಲಿ ಆಡಳಿತವನ್ನು ಪ್ರಧಾನಮಂತ್ರಿ ಮೊದಲನೆಯ ಸಾಲಾರ್‌ಜಂಗ್ ಹಾಗೂ ನವಾಬ್ ಶಮ್ಸುಲ್ಲಾ ಉಮ್ರಾ ಇಬ್ಬರು ನೋಡಿಕೊಳ್ಳುತ್ತಿದ್ದರು. ಕಿರಿಯ ವಯಸ್ಸಿನ ನಿಜಾಮನಿಗೆ ಕ್ರೀಡೆಯಲ್ಲಿ ಅತಿಯಾದ ಉತ್ಸಾಹ ಹೊಂದಿದ್ದನು. ಚತುರ ಬೇಟೆಗಾರನೂ ಆಗಿದ್ದನು. ಮುಂದೆ ನಿಜಾಮ ತನ್ನ ಆಡಳಿತ ಅವಧಿಯಲ್ಲಿ ೧೬೭ ಹುಲಿಗಳನ್ನು ಬೇಟೆಯಾಡಿ ಕೊಂದನು ಎಂದು ಪ್ರತೀತಿಯಿದೆ.[೧೯]

೧೮೮೪ರವರೆಗೂ ಇದ್ದ ರಾಜಪ್ರತಿನಿಧಿಗಳ ಆಳ್ವಿಕೆಯನ್ನು ಕೊನೆಗಾಣಿಸಿ ಅದೇ ವರ್ಷ ನಿಜಾಮ ಮೆಹಬೂಬ್ ಅಲೀಖಾನ್ ಅಧಿಕಾರ ವಹಿಸಿಕೊಂಡನು. ರಾಜ್ಯದ ಜನತೆ ಈ ನಿಜಾಮನ ಆಳ್ವಿಕೆಯ ಕಾಲಕ್ಕೆ ಬಹಳ ನೆಮ್ಮದಿಯಿಂದ ಬಾಳುತ್ತಿದ್ದರು. ಮತಾಂತರ ಘಟನೆಗಳು ಸಂಭವಿಸಿರಬಹುದು. ಆದರೆ ಅವು ಚರಿತ್ರೆಯಲ್ಲಿ ದಾಖಲಾಗುವ ಮಟ್ಟಿಗೆ ಬಲಾತ್ಕಾರದ ಮತಾಂತರಗಳಾಗಿರಲಿಲ್ಲ. ಮೆಹಬೂಬ್ ಅಲೀಖಾನನು ಶಾಂತಿಪ್ರಿಯನು ಉದಾರಿಯೂ ಆಗಿದ್ದನು. ಹಿಂದೂ ಮುಸಲ್ಮಾನ ಈ ಎರಡು ಜನಾಂಗದ ಹಿತವನ್ನು ಕಾಪಾಡುವಲ್ಲಿ ಮುತುವರ್ಜಿ ವಹಿಸಿದನು. ಜಾತಿಯ ಆಧಾರದ ಮೇಲೆ ಯಾವ ಭೇದಭಾವವೂ ಮಾಡುತ್ತಿರಲಿಲ್ಲ. ಧರ್ಮ ನಿರಪೇಕ್ಷ ಭಾವನೆಯಿಂದಲೇ ಆಡಳಿತ ನಡೆಸುತ್ತಿದ್ದನು. ಅಂಥ ಒಂದೆರಡು ಪ್ರಸಂಗಗಳನ್ನು ಇಲ್ಲಿ ಸ್ಮರಿಸಬಹುದಾಗಿದೆ. ಆ ಪ್ರಸಂಗಗಳು ಈ ಕೆಳಗಿನಂತಿವೆ.

ಅಚ್ಯುತರಾವ್ ಎಂಬ ಒಬ್ಬ ಸುಬೇದಾರನು ನಿಜಾಮ ಸಾಹೇಬರ ಒಲವು ಪಡೆಯುವುದಕ್ಕಾಗಿ ಒಮ್ಮೆ ನಿಜಾಮರಲ್ಲಿ ತಾನು ಇಸ್ಲಾಂ ಧರ್ಮವನ್ನು ಸ್ವೀಕರಿಸುತ್ತೇನೆ ಎಂದು ವಿನಂತಿಸಿಕೊಂಡನು. ಆಗ ನಿಜಾಮನಾದ ಮೆಹಬೂಬ್ ಅಲೀಖಾನನು ಹೇಳಿದನು: ''ನೀನು ಇಸ್ಲಾಂ ಧರ್ಮವನ್ನು ಸ್ವೀಕರಿಸ ಬಯಸುವುದಾದರೆ ಮೊದಲು ನಿನ್ನ ಸುಬೇದಾರಿ ಹುದ್ದೆಯನ್ನು ಬಿಡಬೇಕಾಗುತ್ತದೆ. ಯಾಕೆಂದರೆ ಈ ಹುದ್ದೆ ಇರುವುದು ಬರಿ ಬ್ರಾಹ್ಮಣರಿಗಾಗಿ, ಮುಸಲ್ಮಾನರಿಗಲ್ಲ'' ಎಂದು ಗದರಿಸಿದನು.

ಇಂಥದೇ ಇನ್ನೊಂದು ಪ್ರಸಂಗ ಕಂಡುಬರುತ್ತದೆ. ರಾಜ್ಯದ ಪ್ರಧಾನಮಂತ್ರಿಯಾಗಿದ್ದ ಮಹಾರಾಜಾ ಕಿಶನ್ ಪ್ರಸಾದರು ತಮ್ಮ ಸಾರ್ವಭೌಮರ ಧರ್ಮ ನಿರಪೇಕ್ಷತೆಗೆ ಹಾಗೂ ಅವರ ಉದಾರತೆಗೆ ತುಂಬಾ ಮಾರು ಹೋಗಿದ್ದರು. ಈ ಹಿಂದೂ-ಮುಸ್ಲಿಂ ಎಂಬುದು ಅರ್ಥವಿಲ್ಲದ್ದು, ರಾಜನ ಧರ್ಮವೇ ಪ್ರಜೆಗಳಾದ ನಮ್ಮ ಧರ್ಮ ಎಂಬ ಭಾವನೆ ಅವರದ್ದಾಗಿತ್ತು. ಹೀಗಾಗಿ ಅವರು ತಮ್ಮ ಮಗಳನ್ನು ಒಬ್ಬ ಮುಸ್ಲಿಮನಿಗೆ ಕೊಟ್ಟು ಮದುವೆ ಮಾಡಿದ್ದರು. ಇಂಥ ಮಹಾರಾಜಾ ಕಿಶನ್ ಪ್ರಸಾದರು ಒಮ್ಮೆ ತಾವು ಮುಸಲ್ಮಾನರಾಗ ಬೇಕೆಂಬ ಇಚ್ಛೆ ವ್ಯಕ್ತಪಡಿಸಿದರು. ಆಗ ನಿಜಾಮನು ಪ್ರಧಾನಿಯನ್ನು ತರಾಟೆಗೆ ತೆಗೆದುಕೊಂಡು, ''ನೀವು ಮುಸಲ್ಮಾನರಾಗುವುದಾದರೆ ಸಂತೋಷವಾಗಿ ಆಗಬಹುದು. ನನ್ನದೇನು ಅಭ್ಯಂತರವಿಲ್ಲ. ಆದರೆ ಪರಂಪರೆ ಯಿಂದ ಹಿಂದೂಗಳಿಗಾಗಿಯೇ ಕಾಯ್ದಿರಿಸಿಕೊಂಡು ಬಂದಿರುವಂಥ ರಾಜ್ಯದ ಪ್ರಧಾನಮಂತ್ರಿಯ ಪಟ್ಟವನ್ನು ನೀವು ಬಿಡಬೇಕಾಗುತ್ತದೆ.'' ಈ ಮೇಲಿನ ಪ್ರಸಂಗಗಳಿಂದ ನಿಜಾಮನ ಧರ್ಮನಿರಪೇಕ್ಷ ಭಾವನೆ ವ್ಯಕ್ತವಾಗುತ್ತದೆ.

೧೮೯೩ರಲ್ಲಿ ಸ್ವಾಮಿ ವಿವೇಕಾನಂದರು ಸ್ವಲ್ಪ ಕಾಲ ಹೈದರಾಬಾದಿನಲ್ಲಿ ತಂಗಿದ್ದರು. ಆಗ ಸಿಕಂದರಾಬಾದ್ ಮೆಹಬೂಬ್ ಕಾಲೇಜಿನಲ್ಲಿ ಒಂದು ದೊಡ್ಡ ಸಭೆಯನ್ನು ಏರ್ಪಡಿಸಲಾಯಿತು. ಆ ಸಭೆಯನ್ನು ಉದ್ದೇಶಿಸಿ ವಿವೇಕಾನಂದರು ಭಾಷಣ ಮಾಡಿದರು. ಅಲ್ಲಿ ಜಾತಿಭೇದವಿಲ್ಲದೆ ಜನಸಮುದಾಯ ಕಿಕ್ಕಿರಿದು ಸೇರಿತ್ತು. ಜಾತಿಯ ಚೌಕಟ್ಟಿಲ್ಲದೆ ಹೈದರಾಬಾದಿನ ಜನತೆ ಸ್ವಾಮೀಜಿಗಳ ಪ್ರಭಾವ ವ್ಯಕ್ತಿತ್ವದ

ಆಕರ್ಷಣೆಗೆ ಮಾರು ಹೋಗಿತ್ತು. ಇನ್ನೂ ಮಹತ್ವದ ಸಂಗತಿಯೆಂದರೆ ನಿಜಾಮನ ದರಬಾರದ ಸದಸ್ಯರಲ್ಲಿ ಅನೇಕರು ಹೈದರಾಬಾದ್ ರೈಲ್ವೆ ನಿಲ್ದಾಣದಲ್ಲಿ ಸ್ವಾಮೀಜಿಯರನ್ನು ಸ್ವಾಗತಿಸಲು ಹಾಜರಾಗಿದ್ದರು. ರಾಜ್ಯದ ಆಗಿನ ಪ್ರಧಾನಮಂತ್ರಿಗಳಾಗಿದ್ದ ಸರ್.ಅಹಮದ್ ಶಾಹಾ ಹಾಗೂ ಇನ್ನೋರ್ವರು ಸರ್ ಖುರ್ಶಿದ್ ಜಾಹಿರರು ಸ್ವಾಮೀಜಿಯವರ ಭೇಟಿಗೆ ಬಂದಿದ್ದರು. ಇದರಿಂದ ಮೆಹಬೂಬ್ ಅಲೀಖಾನರ ಆಳ್ವಿಕೆಯಲ್ಲಿ ಜನತೆಯ ಸ್ವಾತಂತ್ರ್ಯ ಹಾಗೂ ನೆಮ್ಮದಿಯಿಂದ ಬಾಳುತ್ತಿದ್ದರು ಎಂಬುದಕ್ಕೆ ಇದು ಒಂದು ಪ್ರತ್ಯಕ್ಷವಾದ ಸನ್ನಿವೇಶವಾಗಿದೆ. ನಿಜಾಮ ೧೯೨೨ರಲ್ಲಿ ಮರಣ ಹೊಂದಿದ್ದನು. ಮುಂದೆ ಇವನ ಮಗನಾದ ನಿಜಾಮ ಉಸ್ಮಾನ್ ಅಲೀಖಾನ್ ನಿಜಾಮನಾಗಿ ಅಧಿಕಾರ ವಹಿಸಿಕೊಂಡನು.[೨೦]

## ೭. ಮೀರ್ ಉಸ್ಮಾನ್ ಅಲೀಖಾನ್ ಬಹದ್ದೂರ್: ೧೯೧೧-೧೯೪೮

ಹೈದರಾಬಾದಿನ ಸಂಸ್ಥಾನದ ನಿಜಾಮರಲ್ಲಿಯೇ ಶ್ರೇಷ್ಠ ಹಾಗೂ ಕೊನೆಯ ನಿಜಾಮನಾದ ಮೀರ್ ಉಸ್ಮಾನ್ ಅಲೀಖಾನ್ ಬಹದ್ದೂರ್ ೨೯ ಆಗಸ್ಟ್ ೧೯೧೧ರಲ್ಲಿ ಪಟ್ಟಕ್ಕೆ ಬಂದನು. ನಿಜಾಮ ಪಟ್ಟಕ್ಕೆ ಬಂದ ತಕ್ಷಣ ತನ್ನ ತಲೆಯಲ್ಲಿ ತಾನೊಬ್ಬ ಸಾರ್ವಭೌಮ ಇಸ್ಲಾಂ ಸಾಮ್ರಾಟನಾಗಬೇಕೆಂಬ ಆಕಾಂಕ್ಷೆ ಹುಟ್ಟಿಕೊಂಡಿತ್ತು.[೨೧] ಹೈದರಾಬಾದ್ ಸಂಸ್ಥಾನ ರಕ್ಷಣೆ, ನಿಜಾಮರ ಮಾನ ಮರ್ಯಾದೆ ಮತ್ತು ಅವರ ಯೋಗಕ್ಷೇಮ ಎಲ್ಲವನ್ನು ಬ್ರಿಟಿಶರೇ ನೋಡಿಕೊಳ್ಳುತ್ತಿದ್ದರಿಂದ ನಿಜಾಮರಿಗೆ ನಿಜವಾದ ಅಧಿಕಾರವಾಗಲಿ ಅಥವಾ ತಮ್ಮ ಭವಿಷ್ಯವನ್ನು ತಾವೇ ನಿರ್ಧರಿಸುವ ಸ್ವಾತಂತ್ರ್ಯವಾಗಲೀ ಇರಲಿಲ್ಲ. ಆದರೆ ಉಸ್ಮಾನ್ ಅಲೀಖಾನನಿಗೆ 'ಜಿಲ್ಲುಲ್ಲಾಹ' ಅಥವಾ 'ಜಿಲ್ಲೆಸುವಾಹನಿ' ಎಂದು ಜನ ಸಂಬೋಧಿಸುತ್ತಿದ್ದರು. ಹಿಂದೂಗಳು ರಾಜನನ್ನು ವಿಷ್ಣುವಿನ ಅವತಾರವೆಂದು ಭಾವಿಸುವಂತೆ ಮುಸ್ಲಿಮರು ನಿಜಾಮನನ್ನು ಅಲ್ಲಾನ ಪ್ರತಿರೂಪವೆಂದು ಭಾವಿಸಿ ಆತನನ್ನು ಬಹಳ ಗೌರವದಿಂದ ಕಾಣುತ್ತಿದ್ದರು. ಅದೇ ರೀತಿ ಬ್ರಿಟಿಶರು ಭಾರತದ ಇತರ ಸಂಸ್ಥಾನಾಧಿಪತಿಗಳನ್ನು His Highness ಎಂದು ಸಂಬೋಧಿಸಿದರೆ ನಿಜಾಮನನ್ನು His Exalted Highness ಎಂದು ಸಂಬೋಧಿಸುತ್ತಿದ್ದರು. ಅಲ್ಲದೆ ಬ್ರಿಟಿಶರು ನಿಜಾಮನಿಗೆ ತಮ್ಮ ಸಾಮ್ರಾಜ್ಯದ ನಂಬಿಕಸ್ಥ ಸ್ನೇಹಿತ ಎಂಬ ಅಭಿದಾನವನ್ನು ಕೊಟ್ಟಿದ್ದರು.[೨೨]

ಕ್ರಿ.ಶ.೧೯೧೧ರಲ್ಲಿ ಪಟ್ಟಕ್ಕೆ ಬಂದ ತಕ್ಷಣ ನಿಜಾಮ ಉಸ್ಮಾನ್ ಅಲೀಖಾನನ ತಲೆಯಲ್ಲಿ ತಾನೊಬ್ಬ ಸಾರ್ವಭೌಮ ಇಸ್ಲಾಂ ಸಾಮ್ರಾಟನಾಗಬೇಕೆಂಬ ಆಕಾಂಕ್ಷೆ ಹುಟ್ಟಿಕೊಂಡಿತ್ತು. ಆಗ ಹೈದರಾಬಾದ್ ರಾಜ್ಯದಲ್ಲಿ ಮುಸ್ಲಿಮರ ಸಂಖ್ಯೆ ಸುಮಾರು ೧೦ರಷ್ಟಿತ್ತು. ಹಿಂದೂಗಳ ಸಂಖ್ಯೆ ೮೬.೯ ರಷ್ಟಿತ್ತು. ಹೇಗಾದರೂ ಮಾಡಿ ತನ್ನ ರಾಜ್ಯದಲ್ಲಿ ಮುಸ್ಲಿಮರ ಸಂಖ್ಯೆಯನ್ನು ಹೆಚ್ಚಿಸಬೇಕು, ಹಿಂದೂಗಳ ಸಂಖ್ಯೆಯನ್ನು ಕಡಿಮೆಗೊಳಿಸಬೇಕು ಎಂದು ಯೋಚಿಸುತ್ತಿದ್ದನು. ೧೯೪೧ರ ಜನಗಣತಿಯ ಪ್ರಕಾರ ಮುಸ್ಲಿಮರ ಜನಸಂಖ್ಯೆಯನ್ನು ೩ರಷ್ಟು ಹೆಚ್ಚಾಗಿ ಹಿಂದೂಗಳ ಸಂಖ್ಯೆ ೬ರಷ್ಟು ಕಡಿಮೆಯಾಯಿತು. ಇಡೀ ರಾಜ್ಯದ ಜನಸಂಖ್ಯೆ ೧ ಕೋಟಿ ೪೦ ಲಕ್ಷ ನೂರನಲ್ವತ್ತೆರಡು ಇತ್ತು. ಅದರಲ್ಲಿ ೯೬,೯೦,೫೨೭ ಜನ ಹಿಂದೂಗಳು, ೨೨,೨೭,೬೧೫ ಮುಸ್ಲಿಮರು

ಹಾಗೂ ೨೪,೭೩,೦೦೦ ಸಾವಿರ ಇತರೆ ಧರ್ಮದ ಜನರಿದ್ದರು. ಎಂಟು ಜಿಲ್ಲೆಗಳನ್ನು ಹೊಂದಿದ ತೆಲುಗು ಭಾಷಿಕರ ಸಂಖ್ಯೆ ೪೮ರಷ್ಟು ಐದು ಜಿಲ್ಲೆಗಳನ್ನು ಹೊಂದಿದ ಮರಾಠಿ ಬಾಷಿಕರ ಸಂಖ್ಯೆ ೨೪ ಮೂರು ಜಿಲ್ಲೆಗಳನ್ನು ಹೊಂದಿದ ಕನ್ನಡಿಗರ ಸಂಖ್ಯೆ ೧೨ರಷ್ಟು ಮತ್ತು ಹದಿನಾರು ಜಿಲ್ಲೆಗಳ ಇಡೀ ರಾಜ್ಯದಲ್ಲಿ ಉರ್ದು ಭಾಷಿಕರ ಸಂಖ್ಯೆ ೧೦ ರಷ್ಟು ಇತ್ತು. ಆದರೂ ಇಲ್ಲಿಯ ವಿಡಂಬನೆಯೆಂದರೆ ಆಡಳಿತ ಭಾಷೆ ಉರ್ದುವಾಗಿತ್ತು. ಬಹುಮಟ್ಟಿಗೆ ಶಿಕ್ಷಣ ಮಾಧ್ಯಮವು ಕೂಡ ಉರ್ದುವೇ ಆಗಿತ್ತು. ಜನತೆಯಲ್ಲಿ ಶಿಕ್ಷಣದ ಪ್ರಸಾರವಾದರೆ ರಾಜಕೀಯ ಜಾಗೃತಿ ಉಂಟಾಗುತ್ತದೆ. ಪ್ರಜೆಗಳು ತನಗೆ ವಿರುದ್ಧವಾಗಿ ಬಂಡೇಳುತ್ತಾರೆ ಎಂಬುದು ನಿಜಾಮನ ಧೋರಣೆಯಾಗಿತ್ತು. ಹೀಗಾಗಿ ಆತ ಶಿಕ್ಷಣಕ್ಕೆ ಅಷ್ಟೊಂದು ಪ್ರಾಶಸ್ತ್ಯ ಕೊಡುತ್ತಿರಲಿಲ್ಲ. ಇಡೀ ರಾಜ್ಯದಲ್ಲಿ ೪೩ ಪ್ರೌಢಶಾಲೆಗಳು, ೧೯೮ ಮಾಧ್ಯಮಿಕ ಶಾಲೆಗಳೂ, ೨೯೭೯ ಪ್ರಾಥಮಿಕ ಶಾಲೆಗಳು ಇದ್ದವು. ೬ ಪದವಿಪೂರ್ವ ಕಾಲೇಜುಗಳು ಒಂದು ಪದವಿ ಕಾಲೇಜು ಹಾಗೂ ಉಸ್ಮಾನಿಯಾ ವಿಶ್ವವಿದ್ಯಾಲಯ ಇಷ್ಟು ಮಾತ್ರ ಇದ್ದುದು ಅಲ್ಲಿಯೂ ಪರೋಕ್ಷ ಮತ್ತು ಪ್ರತ್ಯಕ್ಷವಾಗಿ ಉರ್ದು ಕಲಿಕೆಗೆ ಹೆಚ್ಚಿನ ಒತ್ತು ಕೊಡಲಾಗುತ್ತಿತ್ತು. ಎಲ್ಲಾ ಮಟ್ಟದಲ್ಲಿಯೂ ಇಸ್ಲಾಮಿ ಶಿಕ್ಷಣಕ್ಕೆ ಪ್ರೋತ್ಸಾಹವನ್ನು ನೀಡಲಾಗುತ್ತಿತ್ತು.

ಉಸ್ಮಾನಿಯಾ ವಿಶ್ವವಿದ್ಯಾಲಯವು ಅಪ್ಪಟ ಇಸ್ಲಾಮಿಕ್ ಸಂಸ್ಕೃತಿಯ ಸಂಸ್ಥೆಯಾಗಿತ್ತು. ಅರಬ್ಬಿ, ಪಾರ್ಸಿ, ಉರ್ದು, ಭಾಷೆಗಳಲ್ಲಿ ಪರಿಣತಿ ಹೊಂದಿದ ಮೌಲ್ವಿಗಳು ಇಲ್ಲಿಯ ಅಧ್ಯಾಪಕರಾಗಿರುತ್ತಿದ್ದರು. ಇಸ್ಲಾಂ ಧರ್ಮದ ಹೊಗಳಿಕೆ ನಿಜಾಮನ ಯಶೋಗೀತೆ ಮತ್ತು ಹಿಂದೂಗಳ ಅವಹೇಳನ ಇಲ್ಲಿಯ ಅನಧಿಕೃತ ಪಠ್ಯಕ್ರಮದಲ್ಲಿ ಸೇರಿಕೊಂಡಿರುತ್ತಿತ್ತು. ಅಂದಿನ ಪರಿಸ್ಥಿತಿಯ ಒತ್ತಡದಿಂದಾಗಿ ಹಿಂದೂ ವಿದ್ಯಾರ್ಥಿಗಳು ಕೂಡ ಇಸ್ಲಾಮಿಕ್ ಸಂಸ್ಕೃತಿಯೊಂದಿಗೆ ಹೊಂದಿಕೊಳ್ಳಲೇಬೇಕಾಗುತ್ತಿತ್ತು.[೨೩]

ಮಹತ್ವಾಕಾಂಕ್ಷಿಯಾದ ಅರಸನಾಗಿದ್ದು, ಹೈದರಾಬಾದನ್ನು ಒಂದು ಇಸ್ಲಾಮೀ ರಾಜ್ಯವನ್ನಾಗಿ ಪರಿವರ್ತಿಸುವ ಕನಸನ್ನು ಕಂಡಿದ್ದನು. ನಿಜಾಮ ರಾಜ್ಯದಲ್ಲಿ ಹಿಂದೂಗಳು ಪ್ರತಿಶತ ೮೦ರಷ್ಟಾದರೂ ಅವರು ನಿಜಾಮನ ಧರ್ಮಾಂಧತೆಯ ವಿರುದ್ಧ ದಂಗೆ ಏಳುವ ಧೈರ್ಯ ಮಾಡುತ್ತಿರಲಿಲ್ಲ. ಅವರು ಯಾವುದೇ ದುರಾಡಳಿತವನ್ನು ಹಾಗೂ ಪರಕೀಯರ ದಬ್ಬಾಳಿಕೆಯನ್ನು ಸಹಿಸುವ, ಗುಲಾಮಿ ಶೈಲಿಯ ಜೀವನಕ್ಕೆ ಒಗ್ಗಿಕೊಂಡು ಹೋಗಿದ್ದರು. ನಿಜಾಮನ ಅಧೀನದಲ್ಲಿದ್ದ ಶ್ರೀಮಂತ ಹಿಂದೂ ಜಮೀನ್ದಾರರು, ಜಹಗೀರುದಾರರು, ಇನಾಮದಾರರು ಹಾಗೂ ವತನದಾರರು ನಿಜಾಮನ ವಿರುದ್ಧ ದಂಗೆ ಏಳುವ ಸಾಮರ್ಥ್ಯವನ್ನು ಹೊಂದಿರಲಿಲ್ಲ. ಇದನ್ನು ಅರಿತುಕೊಂಡಿದ್ದ ನಿಜಾಮನು ತನ್ನ ಸ್ವಾರ್ಥ ಸಾಧನೆಗಾಗಿ ತನಗೆ ಅನುಕೂಲವಾಗುವ ಪ್ರತಿಯೊಂದು ಕೆಲಸ ಕಾರ್ಯಗಳನ್ನು ನೆರವೇರಿಸಿಕೊಳ್ಳತೊಡಗಿದನು.

ಇಡೀ ಮುಸ್ಲಿಂ ಜಗತ್ತಿನ ಏಕಮಾತ್ರ ಮುಖಂಡನಾಗಬೇಕೆಂಬ ಆಸೆ ನಿಜಾಮನಲ್ಲಿ ಬಲವಾಗಿ ಬೇರೂರಿತ್ತು. ಅಂತರರಾಷ್ಟ್ರೀಯ ವಲಯಗಳಲ್ಲಿ ತನ್ನ ಪ್ರಭಾವ ಬೆಳೆಸಿಕೊಳ್ಳಬೇಕೆಂಬ ಇಚ್ಛೆಯಿಂದ ನಿಜಾಮ ಟರ್ಕಿಯ ಪದಚ್ಯುತ ಸುಲ್ತಾನನ ಇಬ್ಬರು ಹೆಣ್ಣುಮಕ್ಕಳನ್ನು ತನ್ನ ಪುತ್ರರೊಂದಿಗೆ ಮದುವೆ ಮಾಡಿದನು.

ಮೊಹಜಂಜಹಾನ್ ಹೆಂಡತಿ ನಿಲೋಫರ್, ಅಜಂಜಹಾನ್‌ನ ಹೆಂಡತಿ ದುರ್ರೆಶಾಹಬಾರ್. ಕೆಲವು ವರ್ಷಗಳ ವೈವಾಹಿಕ ಜೀವನ ಕಳೆದ ಮೇಲೆ ಟರ್ಕಿಯ ಪದಚ್ಯುತ ಖಲೀಫ್ ಅಬ್ದುಲ್ ಮಜೀದನ ಮಗಳು ನಿಲೋಫರ್ ಗಂಡನನ್ನು ತೊರೆದು ಹೊರಟುಹೋದಳು. ಇದರಿಂದ ನಿಜಾಮನ ಕನಸಾದ ಜಗತ್ತಿನ ಮುಖಂಡನಾಗುವ ಆಸೆ ಆಸೆಯಾಗಿಯೇ ಉಳಿಯಿತು.

ಉಸ್ಮಾನ್ ಅಲೀಖಾನ್ ಇತರ ಸಂಸ್ಥಾನಿಕರಂತೆ ಸುಧಾರಣಾವಾದಿಯಾಗಿರಲಿಲ್ಲ. ರಾಜ್ಯದ ಸಂಪನ್ಮೂಲಗಳ ಬಹುಭಾಗ ರಾಜಪರಿವಾರದವರಿಗೆ ಮೀಸಲಾಗಿದ್ದರಿಂದ ಹೈದರಾಬಾದ್ ಉಳಿದ ರಾಜ್ಯಗಳಿಗಿಂತ ಆರ್ಥಿಕವಾಗಿ ತೀರಾ ಹಿಂದುಳಿದಿತ್ತು. ಮೈಸೂರು ಮತ್ತು ಬರೋಡಾ ಮಹಾರಾಜರಂತೆ ನಿಜಾಮನು ಪ್ರಜೆಗಳ ಯೋಗಕ್ಷೇಮವನ್ನು ಕುರಿತು ಯೋಚಿಸುತ್ತಿರಲಿಲ್ಲ. ಆದರೂ ನಿಜಾಮನ ರಾಜ್ಯದಲ್ಲಿ ರೈಲ್ವೆಮಾರ್ಗವನ್ನು ಅಭಿವೃದ್ಧಿಪಡಿಸಲಾಯಿತು. ಕಾಜಿಪೇತ-ಬಲ್ಲಾರಶಹಾ ಮಾರ್ಗ, ಮುದಖೇಡ-ಆದಿಲಾಬಾದ್ ೧೮೭೮ರಲ್ಲಿ ಹೈದರಾಬಾದ್ ರೈಲ್ವೆ ಮಾರ್ಗ ಬ್ರಾಡ್‌ಗೇಜ್ ಆಗಿ ಪರಿವರ್ತನೆ ಹೊಂದಿ ಇತರ ರಾಜ್ಯಗಳೊಂದಿಗೆ ಸಂಪರ್ಕ ಪಡೆಯಿತು. ಮುಂಬಯಿ-ಮದ್ರಾಸ್ ರೈಲುಮಾರ್ಗ. ಮನ್‌ಮಾಡ್-ಹೈದರಾಬಾದ್ ಮತ್ತು ಗೋದಾವರಿ ಕಣಿವೆ ರೈಲು ಮಾರ್ಗ ಇವೆಲ್ಲಾ ೧೯೧೬ನೇ ಇಸ್ವಿಯಲ್ಲಿ ನಿರ್ಮಾಣ ಗೊಂಡಿದ್ದವು. ೧೯೨೮ರಲ್ಲಿ ಹೈದರಾಬಾದ್ ನಗರದಲ್ಲಿ ಉಸ್ಮಾನಿಯಾ ವಿಶ್ವವಿದ್ಯಾಲಯವನ್ನು ಸ್ಥಾಪಿಸ ಲಾಯಿತು. ನಿಜಾಮನ ರಾಜ್ಯದಲ್ಲಿ ಸ್ವಂತ ನಾಣ್ಯಗಳು ಚಲಾವಣೆಯಲ್ಲಿದ್ದವು. ಮೆಡಿಕಲ್ ಸ್ಕೂಲ್, ಇಂಜಿನಿಯರಿಂಗ್ ಸ್ಕೂಲ್ ಮತ್ತು ಕೃಷಿ ವಿದ್ಯಾಲಯಗಳನ್ನು ಸ್ಥಾಪಿಸಿ ನಿಜಾಮ ತಾನು ಪ್ರಜಾಪಾಲಕ ಬಾದಶಹನೆಂದು ತೋರಿಸಿಕೊಟ್ಟನು. ಹಾಗೇ ನಿಜಾಮನು ಸುಲ್ತಾನ್ ಬಜಾರ್ ಎಂಬ ಪ್ರದೇಶವನ್ನು ಬ್ರಿಟಿಶ್ ರೆಸಿಡೆಂಟ್‌ನಾದ ಹುಂಪೇರ ರೇಯಿಂದ ೧೯೩೩ ಮೇ ೧೪ರಂದು ವಾಪಸ್ಸು ಪಡೆದನು. ಇದರ ಸವಿನೆನಪಿಗಾಗಿ ನಿಜಾಮ ಮೇ ೧೪ರಂದು ಸಾರ್ವಜನಿಕ ರಜಾ ದಿವಸ ಎಂದು ಘೋಷಿಸಿದನು. ೧೯೩೬ರಲ್ಲಿ ಬೀರಾರ್ ಪ್ರದೇಶವನ್ನು ಹೈದರಾಬಾದ್ ಸಂಸ್ಥಾನದಲ್ಲಿ ಸೇರಿಸಿಕೊಂಡು ಇದು ಸಂಸ್ಥಾನದ ಒಂದು ಪ್ರಮುಖ ಅಂಗವೆಂದು ಘೋಷಿಸಿದನು. ಮುಂದೆ ನಿಜಾಮನು ೧೯೩೧ರಿಂದ ೧೯೩೩ರವರೆಗೆ ದುಂಡು ಮೇಜಿನ ಪರಿಷತ್‌ಗೆ ತನ್ನ ಸಂಸ್ಥಾನದ ಪ್ರತಿನಿಧಿಯಾಗಿ ಅಕ್ಬರ ಹೈದರನನ್ನು ಕಳುಹಿಸಿದನು. ಈ ಅಕ್ಬರ್ ಹೈದರ್ ಈ ಮೂರು ಸಭೆಯಲ್ಲಿ ಭಾಗವಹಿಸಿದನು.[೨೫] ನಿಜಾಮ ಮೀರ ಉಸ್ಮಾನ್ ಅಲೀಖಾನನ ಆಡಳಿತದ ಕೊನೆಯ ದಶಕ ಸಂಘರ್ಷದ ಕಾಲವಾಗಿತ್ತು. ಭಾರತದಲ್ಲಿ ರಾಷ್ಟ್ರೀಯ ಆಂದೋಲನ ಪರಾಕಾಷ್ಠತೆಯನ್ನು ತಲುಪಿದ ಸಮಯವದು. ಬ್ರಿಟಿಶರ ಒಳ್ಳೆಯ ಮಿತ್ರನಾಗಿದ್ದ ನಿಜಾಮ ರಾಷ್ಟ್ರೀಯ ಆಂದೋಲನ ಸಂಸ್ಥಾನದಲ್ಲಿ ಹರಡದಂತೆ ಎಚ್ಚರಿಕೆಯನ್ನು ವಹಿಸಿದ್ದನು. ವಿಚಿತ್ರವೆಂದರೆ ಹೈದರಾಬಾದ್ ಸಂಸ್ಥಾನದಲ್ಲಿ ಬಹಿಷ್ಕರಿಸುವ ನಿರ್ಣಯವನ್ನು ತೆಗೆದುಕೊಂಡಿತ್ತು. ೧೯೩೭ರಿಂದ ೧೯೪೮ರ ನಡುವಣ ಅವಧಿಯ ಇತಿಹಾಸ ನಿಜಾಮ ಮತ್ತು ಸ್ವಾಮಿ ರಮಾನಂದ ತೀರ್ಥರ ವ್ಯಕ್ತಿತ್ವಗಳ ಚಿತ್ರಣವಿಲ್ಲದೇ ಎಂದಿಗೂ ಪೂರ್ಣಗೊಳ್ಳಲಾರದು.

ಸುಪ್ತವಾಗಿದ್ದ ರಾಷ್ಟ್ರೀಯ ಆಂದೋಲನ ಮೊದಲಬಾರಿಗೆ ದೊಡ್ಡ ಪ್ರಮಾಣದಲ್ಲಿ ಸ್ಫೋಟವಾಗಿದ್ದು ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ. ಅದು ವಂದೇ ಮಾತರಂ ಚಳುವಳಿಯಲ್ಲಿ. ಈ ಗೀತೆಯ ನಿಷೇಧವನ್ನು ಪ್ರತಿಭಟಿಸಿ ಹಿಂದೂ ವಿದ್ಯಾರ್ಥಿಗಳು ೧೯೩೮ರಲ್ಲಿ ಚಳುವಳಿ ನಡೆಸಿದರು. ಶಾಲಾ-ಕಾಲೇಜುಗಳಿಂದ ಅವರನ್ನು ಹೊರಹಾಕಲಾಯಿತು. ಪ್ರತಿಯಾಗಿ ಕಾಂಗ್ರೆಸ್ಸಿಗರು ಅನೇಕ ಚಳುವಳಿಗಳನ್ನು ಕೈಗೊಂಡರು.

೨೬-೬-೧೯೪೭ರಂದು ನಿಜಾಮನು ಒಂದು "ಫರ್ಮಾನು" ಹೊರಡಿಸಿ ಹೈದರಾಬಾದ್ ಒಂದು ಸ್ವತಂತ್ರ ಸಂಸ್ಥಾನವೆಂದು ಘೋಷಿಸಿದನು. ಕಾಶಿಂ ರಜ್ವಿ ಇದನ್ನು ಬೆಂಬಲಿಸಿದನು. ಇದಕ್ಕೆ ಪ್ರತಿಯಾಗಿ ಕಾಂಗ್ರೆಸ್ ಧ್ವಜ ದಿನಾಚರಣೆ(೨-೯-೧೯೪೭) ದಬ್ಬಾಳಿಕೆ ವಿರೋಧಿ ದಿನಾಚರಣೆ(೨-೧೦-೧೯೪೭), ಒಕ್ಕೂಟ ಸೇರಿ ದಿನಾಚರಣೆ(೭-೮-೧೯೪೭) ಮುಂತಾದವುಗಳನ್ನು ಆಚರಿಸಿತು. ಇದನ್ನು ಸಹಿಸದ ಇತ್ತೇಹದ್‌ನ ಲಾಯಕ್ ಅಲಿ ಬಿಗಿಯಾದ ಹಿಂದೂ ವಿರೋಧಿ ನೀತಿಯನ್ನು ಅನುಸರಿಸಿದನು. ಎಲ್ಲ ಪಕ್ಷಗಳ ಮುಖಂಡರು ಜೈಲಿಗೆ ಹೋದರು. ಗಾಂಧಿ ಟೋಪಿ, ವಂದೇ ಮಾತರಂ ಗೀತೆ, ಭಾರತದ ರಾಷ್ಟ್ರಧ್ವಜ, ಮುಖಂಡರ ಭಾವಚಿತ್ರಗಳು ನಿಷೇಧಕ್ಕೊಳಗಾದವು. ಒಟ್ಟಿನಲ್ಲಿ ಆ ಕಾಲದಲ್ಲಿ ಹೈದರಾಬಾದಿನ ರಾಜಕಾರಣ ಹಾಗೂ ಧಾರ್ಮಿಕತೆಯನ್ನು ಮೀರ್ ಲಾಯಕ ಅಲಿ, ನವಾಬ್ ಮೋಯಿನ್ ಜಂಗ್ ಮತ್ತು ಕಾಸಿಂ ರಜ್ವಿ ತ್ರಿಮೂರ್ತಿಗಳು ನಿರ್ಧರಿಸುತ್ತಿದ್ದರು.

೧೯೪೭ ಆಗಸ್ಟ್ ೧೫ರಂದು ಭಾರತ ಸ್ವತಂತ್ರವಾದರೂ, ಹೈದರಾಬಾದ್ ಸಂಸ್ಥಾನ ಮಾತ್ರ ಇನ್ನೂ ಊಳಿಗಮಾನ್ಯ ಪ್ರಭುವಿನ ಆಡಳಿತದಲ್ಲಿಯೇ ಇತ್ತು. ಸ್ವತಂತ್ರ ಅರಸನಾಗಿಯೇ ಉಳಿಯುವ ನಿಜಾಮನ ಮೇರೆ ಮೀರಿದ ಆಕಾಂಕ್ಷೆಗೆ ಬೆಂಬಲವಾಗಿದ್ದವನು ಕಾಶಿಂ ರಜ್ವಿ ಮತ್ತು ಅವನ ಅನುಯಾಯಿಗಳಾಗಿದ್ದ ರಜಾಕಾರರು ಸಂಸ್ಥಾನದಲ್ಲಿ ಹಿಂದೆಂದೂ ಯಾರೂ ಕಂಡರಿಯದ ಕೇಳರಿಯದ ಅನ್ಯಾಯ, ಅತ್ಯಾಚಾರ, ಹಿಂಸಾಕಾಂಡ ಆರಂಭವಾಗಿದ್ದು ಈ ರಜಾಕಾರರಿಂದ. ಸಂಸ್ಥಾನವನ್ನು ಇಸ್ಲಾಂ ರಾಜ್ಯವನ್ನಾಗಿ ಪರಿವರ್ತಿಸುವ ಭ್ರಮಾಲೋಕದಲ್ಲಿದ್ದ ಈ ರಜಾಕಾರರ ವರ್ತನೆ ಅಸಹನೀಯವಾಗಿತ್ತು.

ಕೊನೆಗೆ ಅನಿವಾರ್ಯವಾಗಿ ಭಾರತ ಸರ್ಕಾರ ಮಧ್ಯ ಪ್ರವೇಶಿಸಬೇಕಾಯಿತು. ಗೃಹಮಂತ್ರಿಗಳಾಗಿದ್ದ 'ಉಕ್ಕಿನ ಮನುಷ್ಯ' ಸರದಾರ ವಲ್ಲಭಬಾಯಿ ಪಟೇಲರು ಹೈದರಾಬಾದಿನ ವಿಮೋಚನೆಗಾಗಿ ೧೯೪೮ ಸೆಪ್ಟೆಂಬರ್ ೯ರಂದು ಸೈನಿಕ ಬಲವನ್ನು ಉಪಯೋಗಿಸಲು ನಿರ್ಧರಿಸಿದರು. ಇದು 'ಆಪರೇಷನ್ ಪೋಲೋ' ಅಥವಾ 'ಪೊಲೀಸ್ ಕಾರ್ಯಾಚರಣೆ' ಎಂದೇ ಪ್ರಸಿದ್ಧವಾಗಿದೆ.

ಭಾರತ ಸೈನ್ಯದ ಮುಖ್ಯ ತುಕಡಿ ಸೆಪ್ಟೆಂಬರ್ ೧೩ರಂದು ಸೊಲ್ಲಾಪುರದ ಕಡೆಯಿಂದ ಹೈದರಾಬಾದ್ ಗಡಿ ಪ್ರವೇಶಿಸಿತು. ಆಗ ಬೆಳಗಿನ ಜಾವ ೪ ಗಂಟೆ. ಪೂರಕವಾದ ೪ ತುಕಡಿಗಳು ಅಹಮದ್ ನಗರ, ಸೆಂಟ್ರಲ್ ಪ್ರಾವಿನ್ಸ್, ಮದ್ರಾಸ್ ಮತ್ತು ಮೈಸೂರು ಕಡೆಯಿಂದ ಹೈದರಾಬಾದ್ ಸಂಸ್ಥಾನಕ್ಕೆ ನುಗ್ಗಿದ್ದವು. ಜನರಲ್ ರಾಜೇಂದ್ರ ಈ ಕಾರ್ಯಾಚರಣೆಯ ನೇತೃತ್ವ ವಹಿಸಿದ್ದರು.

ಈ ಕಾರ್ಯಾಚರಣೆ ೧೭-೯-೧೯೪೮ರಲ್ಲಿ ಮುಗಿಯಿತು. ಹೈದರಾಬಾದ್ ಭಾರತ ಸೈನಕ್ಕೆ ಶರಣಾಯಿತು. ಸಂಸ್ಥಾನ ಭಾರತ ಒಕ್ಕೂಟದಲ್ಲಿ ವಿಲೀನವಾಯಿತು. ಇದರೊಂದಿಗೆ ಮೀರ್ ಉಸ್ಮಾನ್ ಅಲೀಖಾನರು ಹಾಗೂ ದಕ್ಷಿಣದಲ್ಲೊಂದು ಮುಸ್ಲಿಂ ಪ್ರಾಬಲ್ಯ ಸ್ಥಾಪಿಸಬಯಸಿದ್ದ ಕಾಶಿಂ ರಜ್ವಿಯ ಎಲ್ಲ ಮಹತ್ವಾಕಾಂಕ್ಷೆಗಳು ಮಣ್ಣು ಪಾಲಾದವು. ಹೈದರಾಬಾದ್ ಸಂಸ್ಥಾನವು ಭಾರತ ಒಕ್ಕೂಟ ಸೇರಿದ ನಂತರ ಕೆಲವು ಕಾಲ ರಾಜಪ್ರಮುಖರಾಗಿದ್ದ ಮೀರ್ ಉಸ್ಮಾನ್ ಅಲೀಖಾನ್ ಕೆಲ ಅವಧಿಯ ನಂತರ ಹುದ್ದೆಯನ್ನು ತಿರಸ್ಕರಿಸಿದರು. ೧೯೬೭ರಲ್ಲಿ ಇವರು ಮರಣ ಹೊಂದಿದರು. ಆಸಫ್‌ಜಾಹ್ ವಂಶದ ಕೊನೆಯ ಕೊಂಡಿ ಕಳಚಿ ಈ ರಾಜಮನೆತನ ಇತಿಹಾಸದ ಪುಟ ಸೇರಿತು.[೨೫]

## ಅಡಿಟಿಪ್ಪಣಿಗಳು

೧. ಮಹಾಬಲೇಶ್ವರಪ್ಪ ಬಿ.ಸಿ., ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳುವಳಿ, ೧೯೯೭, ಪು.೧೨

೨. ಬಸವರಾಜ ಪೋಲಿಸ್ ಪಾಟೀಲ್, ಬಿಡುಗಡೆ, ಅಮರ ಪ್ರಕಾಶನ, ಗುಲಬರ್ಗಾ, ೨೦೦೨, ಪು.೧೮

೩. ಅದೇ, ಪು.೧೯

೪. ಪಾಟೀಲ್ ಎಮ್.ಬಿ., ಗುಲಬರ್ಗಾ ಜಿಲ್ಲಾದರ್ಶನ, ೧೯೯೭, ಪು.೭೨

೫. ಅದೇ, ಪು.೭೩

೬. ಬಸವರಾಜ ಪೊಲೀಸ್ ಪಾಟೀಲ್, ಪೂರ್ವೋಕ್ತ, ಪು.೧೯

೭. ಪಾಟೀಲ್ ಎಮ್.ಬಿ., ಪೂರ್ವೋಕ್ತ, ೧೯೯೭, ಪು.೭೩

೮. ಬಸವರಾಜ ಪೋಲಿಸ್ ಪಾಟೀಲ್, ಪೂರ್ವೋಕ್ತ, ೨೦೦೨, ಪು.೧೯

೯. ಅದೇ, ಪು.೨೦

೧೦. ಬಾಲಚಂದ್ರ ಜಯಶೆಟ್ಟಿ, ಹೈದರಾಬಾದ್ ಕರ್ನಾಟಕದ ವಿಮೋಚನಾ ಚಳುವಳಿ, ೨೦೦೬, ಪು.೧೦

೧೧. ಅದೇ, ಪು.೧೧

೧೨. ಪಾಟೀಲ್ ಎಮ್.ಬಿ., ಪೂರ್ವೋಕ್ತ, ೧೯೯೭, ಪು.೭೩

೧೩. ಬಸವರಾಜ ಪೋಲಿಸ್ ಪಾಟೀಲ್, ಪೂರ್ವೋಕ್ತ, ೨೦೧೨, ಪು.೨೦

೧೪. ಪಾಟೀಲ್ ಎಮ್.ಬಿ., ಪೂರ್ವೋಕ್ತ, ೧೯೯೭, ಪು.೭೩-೭೪

೧೫. ಮಹಾಬಲೇಶ್ವರಪ್ಪ ಬಿ.ಸಿ., ಪೂರ್ವೋಕ್ತ, ೧೯೯೭, ಪು.೧೩

೧೬. ಪಾಟೀಲ್ ಎಮ್.ಬಿ., ಪೂರ್ವೋಕ್ತ, ೧೯೯೭, ಪು.೭೪

೧೭. ಬಸವರಾಜ ಪೋಲಿಸ್ ಪಾಟೀಲ್, ಪೂರ್ವೋಕ್ತ, ೨೦೦೨, ಪು.೨೨

೧೮. ಮಹಾಬಲೇಶ್ವರಪ್ಪ ಬಿ.ಸಿ., ಪೂರ್ವೋಕ್ತ, ೧೯೯೭, ಪು.೧೪/೧೫

೧೯. ಪಾಟೀಲ್ ಎಮ್.ಬಿ., ಪೂರ್ವೋಕ್ತ, ೧೯೯೭, ಪು.೭೪

೨೦. ಬಾಲಚಂದ್ರ ಜಯಶೆಟ್ಟಿ, ಪೂರ್ವೋಕ್ತ, ೨೦೦೬, ಪು.೯-೧೦

೨೧. ಅದೇ, ಪು.೧೪

೨೨. ಗೋಪಾಲರಾವ್ ಹೇಜೀಬ್, ಹೈದರಾಬಾದ್ ಮುಕ್ತಿಸಂಘರ್ಷ, ೨೦೦೧, ಪು.೧೮-೧೯

೨೩. ಬಾಲಚಂದ್ರ ಜಯಶೆಟ್ಟಿ, ಪೂರ್ವೋಕ್ತ, ೨೦೦೬, ಪು.೧೪

೨೪. ಗೋಪಾಲರಾವ್ ಹೇಜೀಬ್, ಪೂರ್ವೋಕ್ತ, ೨೦೦೧, ಪು.೨೬

೨೫. ಹೆನ್ರಿ ಜಾರ್ಜ್ ಬ್ರೆಜ್, ದಿ ನಿಜಾಮ್, ನವದೆಹಲಿ, ಪು.೧೦೭

೨೬. ಬಸವರಾಜ ಪೋಲಿಸ್ ಪಾಟೀಲ್, ಪೂರ್ವೋಕ್ತ, ೨೦೦೨, ಪು.೨೪-೨೫, ೨೬

# ಅಧ್ಯಾಯ ನಾಲ್ಕು

# ದಿವಾನರಾಗಿ ಮಿರ್ಜಾ ಎಂ ಇಸ್ಮಾಯಿಲ್

## ೪.೧. ಮೈಸೂರು ಸಂಸ್ಥಾನ

## ೪.೨. ಜಯಪುರ ಸಂಸ್ಥಾನ

## ೪.೩. ಹೈದರಾಬಾದ್ ಸಂಸ್ಥಾನ

# ಅಧ್ಯಾಯ ನಾಲ್ಕು

## ದಿವಾನರಾಗಿ ಮಿರ್ಜಾ ಎಂ ಇಸ್ಮಾಯಿಲ್

ಸರ್.ಮಿರ್ಜಾ ಎಂ ಇಸ್ಮಾಯಿಲ್ ಅವರು ರಾಜನೀತಿ ನಿಪುಣ, ಮುತ್ಸದಿ ಹಾಗೂ ನುರಿತ ಆಡಳಿತಗಾರ, ಒಂದು ರೀತಿ ಪ್ರಗತಿಯ ಆರಾಧಕ. ತಮ್ಮ ದಿವಾನಗಿರಿಯ ಆರಂಭಕಾಲದ ಸಮಸ್ಯೆಗಳನ್ನು ಎಚ್ಚರಿಕೆಯಿಂದ, ಜಾಣ್ಮೆಯಿಂದ ಬಗೆಹರಿಸಿಕೊಂಡು ಮೈಸೂರು, ಜಯಪುರ ಮತ್ತು ಹೈದರಾಬಾದ್ ಸಂಸ್ಥಾನದಲ್ಲಿ ದಿವಾನ ಆಗಿ ಮಾಡಿದ ಕಾರ್ಯಗಳಿಂದ ಜನರ ಮನಸ್ಸಿನಲ್ಲಿ ಅಚ್ಚಲವಾಗಿ ಉಳಿದರು. ಈ ಸಂಸ್ಥಾನಗಳಲ್ಲಿ ಪ್ರಗತಿಪರ ಕೆಲಸಕಾರ್ಯಗಳನ್ನು ಮಾಡಿ ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಸಾರ್ವಜನಿಕವಾಗಿ ಇತರ ಸಂಸ್ಥಾನಗಳಿಗಿಂತ ಪ್ರಗತಿಪರ ಸಂಸ್ಥಾನಗಳನ್ನಾಗಿ ಮಾಡಿದರು. ಮೈಸೂರು ಸಂಸ್ಥಾನದಲ್ಲಿ ದೊಡ್ಡ ದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸಿದರು. ಗುಡಿಕೈಗಾರಿಕೆ, ರೇಷ್ಮೆ ಕೈಗಾರಿಕೆ ಹಾಗೂ ಕೃಷಿಗೆ ಹೆಚ್ಚಿನ ಮಹತ್ವವನ್ನು ನೀಡಿ ಸಂಸ್ಥಾನದ ಆದಾಯವನ್ನು ಹೆಚ್ಚಿಸುವ ಮೂಲಕ ಆರ್ಥಿಕವಾಗಿ ಬಲಿಷ್ಠ ಸಂಸ್ಥಾನವನ್ನಾಗಿ ಮಾಡಿದರು. ಅದೇ ರೀತಿ ಜಯಪುರದಲ್ಲಿ ಕೂಡ ಅನೇಕ ಪ್ರಗತಿಪರ ಕಾರ್ಯಗಳನ್ನು ಮಾಡಿದರು. ಮೈಸೂರು ಸಂಸ್ಥಾನದಲ್ಲಿ ಮಾಡಿದ ಕೆಲಸ ಕಾರ್ಯಗಳಂತೆ ಜಯಪುರದಲ್ಲಿ ಸಾರ್ವಜನಿಕರ ಹಾಗೂ ಆಡಳಿತಗಾರರ ಮಧ್ಯೆ ಇದ್ದ ವ್ಯತ್ಯಾಸವನ್ನು ಹೋಗಲಾಡಿಸಿ ಸಾರ್ವಜನಿಕರಲ್ಲಿ ಭರವಸೆ ಮೂಡುವಂತೆ ಮಾಡಿದರು. ಇವೆಲ್ಲವನ್ನು ನೋಡಿದ ಹೈದರಾಬಾದಿನ ನಿಜಾಮ ತಮ್ಮ ಸಂಸ್ಥಾನದ ಪ್ರಗತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ದಿವಾನರಾಗಿ ತಮ್ಮ ಸಂಸ್ಥಾನಕ್ಕೆ ಬರಬೇಕೆಂದು ಕೇಳಿಕೊಂಡನು. ನಿಜಾಮನ ಕೋರಿಕೆಯಂತೆ ಮಿರ್ಜಾ ಅವರು ಹೈದರಾಬಾದ್ ಸಂಸ್ಥಾನದ ದಿವಾನರಾಗಲು ಒಪ್ಪಿಕೊಂಡು ಅಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೆತ್ತಿಕೊಂಡರು. ಈ ರೀತಿಯಾಗಿ ಮಿರ್ಜಾ ಅವರು ತಮ್ಮ ಅತಿ ಹೆಚ್ಚು ಕಾಲ ದಿವಾನರಾಗಿ ಮಾಡಿದ ಸೇವೆಯಿಂದ ತೃಪ್ತರಾಗಿ ಸಂಸ್ಥಾನಗಳ ಪ್ರಗತಿಗಾಗಿ ಹಗಲು-ಇರುಳು ಎನ್ನದೆ ದಿನ ನಿತ್ಯ ಕೆಲಸ ಕಾರ್ಯಗಳಿಂದ ಪ್ರಗತಿ ಕಂಡುಕೊಂಡರು. ಈ ಮಹಾ ಸಾಧನೆಯಿಂದ ಆಧುನಿಕ ಇತಿಹಾಸದಲ್ಲಿ ಮಿರ್ಜಾ ಎಂ ಇಸ್ಮಾಯಿಲ್ ಅವರಿಗೆ ಒಂದು ವಿಶಿಷ್ಟ ಸ್ಥಾನ ಪ್ರಾಪ್ತವಾಗಿದೆ.

## ೪.೧. ಮೈಸೂರು ಸಂಸ್ಥಾನ

ಮಿರ್ಜಾ ಎಂ ಇಸ್ಮಾಯಿಲ್ ಅವರು ಮೈಸೂರು ಸಂಸ್ಥಾನದ ದಿವಾನರಾಗಿ ೧೯೨೬ ರಿಂದ ೧೯೪೧ರವರೆಗೆ ಸುಮಾರು ಅರ್ಧ ಶತಮಾನ ಮೈಸೂರು ಸಂಸ್ಥಾನಕ್ಕಾಗಿ ದುಡಿದರು. ಈ ಅವಧಿಯಲ್ಲಿ ಭಾರತದಾದ್ಯಂತ ತೀವ್ರತರವಾದ ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಗಳು ಕಾಣಿಸಿಕೊಂಡವು. ಗಾಂಧೀಜಿಯವರ ನೇತೃತ್ವದಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಬ್ರಿಟಿಶ್ ವಸಾಹತುಶಾಹಿಯಿಂದ ಭಾರತವನ್ನು ಸ್ವತಂತ್ರಗೊಳಿಸಲು ಹೋರಾಟ ನಡೆಸಿದರೆ, ಮೈಸೂರು ಸಂಸ್ಥಾನದ ಆಡಳಿತದ ವಿರುದ್ಧ ಹಲವು ರಾಜಕೀಯ ಗುಂಪುಗಳು ಹೋರಾಟ ನಡೆಸುತ್ತಿದ್ದವು. ಸಂಸ್ಥಾನವು ಈ ಗೊಂದಲಗಳ ಸುಳಿಯಿಂದ ಹೊರಬರಲು ತವಕಿಸುತ್ತಿತ್ತು.

ಮೈಸೂರು ಸಂಸ್ಥಾನ ಮೊದಲು ವಿವಿಧ ಬ್ರಾಹ್ಮಣ ಗುಂಪುಗಳು ನಡೆಸಿದ ಮೇಲಾಟದ ರಾಜಕೀಯ ವನ್ನು ಕಂಡರೆ, ಆನಂತರ ಬ್ರಾಹ್ಮಣ-ಬ್ರಾಹ್ಮಣೇತರ ಇತ್ಯಾದಿ ಜಾತಿ ಸಂಘರ್ಷಗಳ ಆಡೊಂಬಲ ವಾಗಿತ್ತು. ಈ ಗೊಂದಲವನ್ನು ತಿಳಿಯಾಗಿಸಲು ಮಹಾರಾಜ ಕೃಷ್ಣರಾಜ ಒಡೆಯರು ವಿಶ್ವೇಶ್ವರಯ್ಯನವರನ್ನು ದಿವಾನರಾಗಿ ನೇಮಿಸಿದರು. ಆದರೂ ಕೂಡ ರಾಜಕೀಯ ಪರಿಸ್ಥಿತಿ ಹೆಚ್ಚು ಗೊಂದಲಮಯವಾಗಿತ್ತು. ವಿಶ್ವೇಶ್ವರಯ್ಯನವರೆ ಈ ರಾಜಕೀಯ ಗುಂಪುಗಳ ದಾಳಿಗೆ ತತ್ತರಿಸಿ ತಮ್ಮ ಪದವಿಗೆ ರಾಜೀನಾಮೆ ನೀಡಬೇಕಾಯಿತು. ರಾಜಕೀಯ ಅಧಿಕಾರವನ್ನು ಜನತಾಂತ್ರಿಕರಣಗೊಳಿಸಬೇಕೆಂದು ಕೇಳಿ ಬ್ರಾಹ್ಮಣೇತರ ಚಳವಳಿ ನಡೆಯಿತು. ಮಹಾರಾಜರು ಈ ಬೇಡಿಕೆಗೆ ಪರೋಕ್ಷವಾಗಿ ಬೆಂಬಲ ಕೊಟ್ಟು ಹಿಂದುಳಿದ ವರ್ಗಗಳ ಆಯೋಗ ಒಂದನ್ನು ರಚಿಸಿದರು. ಇದಕ್ಕೆ ವಿರೋಧವಿದ್ದ ದಿವಾನ ವಿಶ್ವೇಶ್ವರಯ್ಯನವರು ತಮ್ಮ ಪದವಿ ತ್ಯಜಿಸಿ ಹೊರನಡೆದರು. ರಾಜ್ಯದ ಜನಸಂಖ್ಯೆಯಲ್ಲಿ ಗಣನೀಯ ಪ್ರಮಾಣದಲ್ಲಿದ್ದ ಬ್ರಾಹ್ಮಣೇತರರನ್ನು ಎದುರು ಹಾಕಿಕೊಳ್ಳಲು ಮಹಾರಾಜರಿಗೆ ಸಾಧ್ಯವಿರಲಿಲ್ಲ ಹಾಗಾಗಿಯೇ ಮಿಲ್ಲರ್ ಸಮಿತಿಯನ್ನು ನೇಮಕ ಮಾಡಿ ರಾಜಕೀಯ ಚಳುವಳಿಯನ್ನು ಶಮನಗೊಳಿಸಿದರು.

ರಾಜ್ಯದ ಮಂತ್ರಿಮಂಡಲದ ಸದಸ್ಯರಾಗಿದ್ದ ಸರ್ದಾರ ಕಾಂತರಾಜ ಅರಸ, ಎ.ಆರ್ .ಬ್ಯಾನರ್ಜಿ ಮತ್ತು ವಿಶೇಷ ಮಂತ್ರಿಯಾಗಿದ್ದ ಕಂಠೀರವ ನರಸಿಂಹರಾಜ ಒಡೆಯರ್ ಕೂಡಿ ಬ್ರಾಹ್ಮಣೇತರರ ರಾಜಕೀಯ ಚಳುವಳಿಗೆ ಪರೋಕ್ಷವಾಗಿ ಬೆಂಬಲ ನೀಡಿದರು. ಈ ಮೂವರಲ್ಲಿ ಕಾಂತರಾಜ ಅರಸರು ಮಹಾರಾಜರ ಸೋದರ ಮಾವನಾದರೆ ಕಂಠೀರವ ನರಸಿಂಹರಾಜರು ಮಹಾರಾಜರ ಖಾಸಾ ತಮ್ಮ ಎಂಬುದು ವಿಶೇಷವಾಗಿತ್ತು.[೧]

ವಿಶ್ವೇಶ್ವರಯ್ಯನವರ ನಂತರ ಕಾಂತರಾಜರು ಮತ್ತು ಬ್ಯಾನರ್ಜಿ ಕ್ರಮವಾಗಿ ದಿವಾನರಾದರು. ಮಿಲ್ಲರ್ ಸಮಿತಿಯ ವರದಿಯೇನೋ ಕಾರ್ಯಗತವಾಯಿತು. ಆದರೆ ರಾಜ್ಯದ ಭವಿಷ್ಯದ ಬಗ್ಗೆ

ಮುನ್ನೋಟವಾಗಲಿ, ಆಡಳಿತ ವಿಚಕ್ಷಣತೆಯಾಗಲಿ ಇಲ್ಲದಿದ್ದ ಈ ದಿವಾನರುಗಳ ಆಡಳಿತ ನೀರಸವಾಗಿ ಯಾಂತ್ರಿಕವಾಗಿ ನಡೆಯಿತು. ಜನರನ್ನು ಸಂತೃಪ್ತಗೊಳಿಸುವ ಯೋಜನೆಗಳಾಗಲಿ ರಾಜ್ಯದ ಅಭಿವೃದ್ಧಿ ಯೋಜನೆಗಳಾಗಲಿ ರೂಪಿತವಾಗಲಿಲ್ಲ. ಆದರೆ ಭಾರತದ ವಿವಿಧ ಪ್ರದೇಶಗಳಲ್ಲಿ ಆಗುತ್ತಿದ್ದ ರಾಜಕೀಯ ಬೆಳವಣಿಗೆ ಮೈಸೂರಿನ ಮೇಲೂ ಪ್ರಭಾವ ಬೀರಿ ರಾಜರಿಗೆ ಕಿರಿಕಿರಿ ಉಂಟುಮಾಡುವ ವಿದ್ಯಮಾನಗಳು ಘಟಿಸುವ ಸಾಧ್ಯತೆ ಗೋಚರವಾಗತೊಡಗಿತ್ತು. ಗಾಂಧೀಜಿ ಅಸಹಕಾರ ಚಳುವಳಿಯನ್ನು ಘೋಷಿಸಿ ಅನಂತರ ಹಲವಾರು ರಚನಾತ್ಮಕ ಕಾರ್ಯಕ್ರಮವನ್ನು ಹಮ್ಮಿಕೊಂಡು ಜನರಲ್ಲಿ ವಸಾಹತು ವಿರೋಧ ರಾಷ್ಟ್ರೀಯ ಭಾವನೆಯನ್ನು ಹಾಗೂ ನಿರಕುಂಶ ಆಡಳಿತವನ್ನು ಪ್ರತಿಭಟಿಸುವ ಕೆಚ್ಚನ್ನು ಬೆಳೆಸಲು ಕಾರ್ಯತತ್ಪರರಾದರು.[೨]

ಮೈಸೂರು "ಮಾದರಿ ರಾಜ್ಯ"ವೆನಿಸಿಕೊಂಡಿದ್ದರೂ ಅದು ತಾತ್ವಿಕವಾಗಿ ನಿರಂಕುಶ ಅಧಿಕಾರಕ್ಕೆ ಒಳಪಟ್ಟ ಸಂಸ್ಥಾನವೇ ಆಗಿತ್ತು. ಜನರಲ್ಲಿ ಬೆಳೆಯುತ್ತಿದ್ದ ಜನತಾಂತ್ರಿಕ ಆಶಯಗಳು ರಾಜರ ಅಧಿಕಾರವನ್ನು ಪ್ರಶ್ನಿಸುವ ಎಲ್ಲಾ ಸಾಧ್ಯತೆಗಳಿದ್ದವು. ಇದನ್ನು ಮನಗಂಡ ನಾಲ್ವಡಿ ಕೃಷ್ಣರಾಜರು ಪರಿಸ್ಥಿತಿಯನ್ನು ನಿಭಾಯಿಸಬಲ್ಲ ಒಬ್ಬರನ್ನು ದಿವಾನರನ್ನಾಗಿ ನೇಮಿಸಲು ತೀರ್ಮಾನಿಸಿದರು. ಅಂದರೆ ಸ್ಥಳೀಯ ರಾಜಕೀಯಗಳಿಂದ ದೂರವಿದ್ದವರು, ಆದರೆ ಅದರ ಬಗ್ಗೆ ಅರಿವಿದ್ದವರು, ಮಹಾರಾಜರ ಮತ್ತು ರಾಜ್ಯದ ಹಿತವನ್ನು ಕಾಯಬಲ್ಲವರು, ಬ್ರಿಟಿಶರೊಡನೆ ಉತ್ತಮವಾಗಿ ವ್ಯವಹರಿಸಬಲ್ಲವರು ಹಾಗೂ ಬೆಳೆಯುತ್ತಿದ್ದ ರಾಷ್ಟ್ರೀಯವಾದ ಹೋರಾಟದ ಸಂದರ್ಭವನ್ನು ನಿಭಾಯಿಸಿಕೊಂಡು ರಾಜ್ಯವನ್ನು ಮುನ್ನಡೆಸಬಲ್ಲವರಾದ ಒಬ್ಬ ಮುತ್ಸದಿ ಅವರಿಗೆ ಅವಶ್ಯಕವೆನಿಸಿತು. ಮಹಾರಾಜರ ಕಣ್ಣಿಗೆ ಆಗ ಗೋಚರವಾದವರು ಮಿರ್ಜಾ ಎಂ ಇಸ್ಮಾಯಿಲ್, ಮಿರ್ಜಾ ತಮ್ಮ ನಿರೀಕ್ಷೆಯ ಮಟ್ಟಕ್ಕೆ ಏರಬಲ್ಲವರೆಂದು ಅವರಿಗೆ ಅನ್ನಿಸಿರಬೇಕು.[೩]

ಮಿರ್ಜಾ ಅವರ ಪೂರ್ವಿಕರು ೧೮೨೪ರ ಸುಮಾರಿಗೆ ಪರ್ಶಿಯಾದಿಂದ ಕುದುರೆ ವ್ಯಾಪಾರಿಗಳಾಗಿ ಭಾರತಕ್ಕೆ ಬಂದವರು. ಈ ವಂಶದ ಅಲಿ ಅಸ್ಕರ್ ಬೆಂಗಳೂರಿನಲ್ಲಿ ನೆಲೆಸಿ ಮುಮ್ಮಡಿ ಕೃಷ್ಣರಾಜ ಒಡೆಯರ ಸಂಪರ್ಕಕ್ಕೆ ಬಂದನು. ಇವನ ಹಿರಿಯ ಮಗನಾದ ಆಗಾಖಾನನು ಚಾಮರಾಜ ಮಹಾರಾಜರ ಅಂಗರಕ್ಷಕನಾಗಿದ್ದನು. ಇವನ ಮಗನೇ ಮಿರ್ಜಾ ಎಂ ಇಸ್ಮಾಯಿಲ್. ಇವರು ೧೮೮೩ರಲ್ಲಿ ಜನಿಸಿದರು. ಅರಮನೆಯಲ್ಲಿ ನಡೆಸುತ್ತಿದ್ದ ರಾಯಲ್ ಸ್ಕೂಲ್‌ನಲ್ಲಿ ಕೃಷ್ಣರಾಜ ಒಡೆಯರ ಒಡನಾಡಿಗಳಾಗಿ[೪] ಆಪ್ತ ಸ್ನೇಹಿತರಾಗಿ ಅವರ ಜೊತೆಗೆ ಆಟವಾಡುತ್ತಾ ರಾಜಪರಿವಾರದ ಜೊತೆಗೆ ಉತ್ತಮವಾದ ಸಂಬಂಧವನ್ನು ತನ್ನ ತಂದೆಯಂತೆ ಮುಂದುವರಿಸಿಕೊಂಡರು.[೫] ಮಿರ್ಜಾ ಶಿಕ್ಷಣ ಮುಗಿಸಿ ಮೈಸೂರಿನಲ್ಲಿ ಸರ್ಕಾರಿ ಸೇವೆ ಸೇರಿದರು. ಪೋಲೀಸ್ ಇಲಾಖೆಯಲ್ಲಿ ಸ್ವಲ್ಪ ಕಾಲವಿದ್ದುದನ್ನು ಬಿಟ್ಟರೆ, ಅವರ ಸೇವೆಯೆಲ್ಲಾ ಅರಮನೆಗೆ ಸೀಮಿತಗೊಂಡಿತ್ತು. ಮಹಾರಾಜರು ಸಹಪಾಟಿಯಾಗಿದ್ದುದರ ಜೊತೆಗೆ ಮಿರ್ಜಾ ಅವರ ಆತ್ಮೀಯ ಮಿತ್ರರೂ ಆಗಿದ್ದರು. ಮಹಾರಾಜರ ಸಹಾಯಕ ಕಾರ್ಯದರ್ಶಿಯಾಗಿ ಮತ್ತು ಹುಜೂರ್ ಕಾರ್ಯದರ್ಶಿ ಸ್ಥಾನಗಳಲ್ಲಿದ್ದ ಮಿರ್ಜಾ ರಾಜ್ಯದ ರಾಜಕೀಯ ಆಡಳಿತ ಒಳಹೊರಗಳನ್ನು ಬಲ್ಲವರಾಗಿದ್ದರು. ರಾಜ್ಯದ ಆಡಳಿತ, ರಾಜಕೀಯ

ಮತ್ತು ಅರಮನೆಯಲ್ಲಿ ನಡೆಯುತ್ತಿದ್ದ ತಂತ್ರಗಾರಿಕೆ, ಕುತಂತ್ರಗಳಿಂದ ಬೇಸತ್ತಿದ್ದ ಮಹಾರಾಜರು ಯುವಕರು, ವಿನಯಶೀಲರೂ, ತನಗೆ, ರಾಜ್ಯಕ್ಕೆ ನಿಷ್ಠರಾಗಿ ಸೇವೆ ಸಲ್ಲಿಸಿದ್ದ ತಮ್ಮ ಮಿತ್ರ ಮಿರ್ಜಾರನ್ನು ದಿವಾನರಾಗಿ ನೇಮಿಸಿದರು. ಆ ವೇಳೆಗೆ ಮಿರ್ಜಾ ಎಂ ಇಸ್ಮಾಯಿಲ್ ಮೂರು ದಶಕಗಳಷ್ಟು ದೀರ್ಘಕಾಲ ಮೈಸೂರಿನಲ್ಲಿ ಆಯಕಟ್ಟಿನ ಸ್ಥಾನಗಳಲ್ಲಿದ್ದು ಅಪಾರ ಅನುಭವದೊಂದಿಗೆ ಒಳ್ಳೆಯ ಮತ್ತು ಸಮರ್ಥ ಅಧಿಕಾರಿಯೆಂದು ಹೆಸರು ಗಳಿಸಿದ್ದರು.[೬]

ಮಿರ್ಜಾ ಎಂ ಇಸ್ಮಾಯಿಲರು ಮಹಾರಾಜರ ಕಾರ್ಯದರ್ಶಿಯಾಗಿದ್ದಾಗಲೇ ಮೈಸೂರು ನಗರವನ್ನು ಸುಂದರಗೊಳಿಸುವುದಕ್ಕೆ ಶ್ರಮಿಸಿದರು. ಇದರಿಂದ ಇದು ಉದ್ಯಾನಗಳ ನಗರ ಎಂದು ಪ್ರಸಿದ್ಧಿಯನ್ನು ಪಡೆಯಿತು. ದಿವಾನರಾದ ಮಿರ್ಜಾ ಅವರು ಸಂಸ್ಥಾನದ ಉನ್ನತಿಗಾಗಿ ದುಡಿದರು. ಇದರಿಂದಾಗಿ ರಾಜ್ಯವು ಬಹುಮುಖ ಪ್ರಗತಿಯನ್ನು ಸಾಧಿಸುವಂತಾಯಿತು. ಇವರು ವಿಶ್ವೇಶ್ವರಯ್ಯನವರು ನಡೆದ ಹೆಜ್ಜೆಯ ಜಾಡನ್ನು ಅನುಸರಿಸಿದರು. ಕೈಗಾರಿಕಾ ಅಭ್ಯುದಯಕ್ಕಾಗಿ ದುಡಿದು, ಸಾರ್ವತ್ರಿಕ ಹಾಗೂ ಸರ್ಕಾರಿ ವಲಯಗಳಲ್ಲಿ ಕೈಗಾರಿಕಾ ಬೆಳವಣಿಗೆಗೆ ಅವಕಾಶವನ್ನು ನೀಡಿದರು. ದಿವಾನರು ಭದ್ರಾವತಿಯಲ್ಲಿ ಉಕ್ಕು ಸ್ಥಾವರ, ಕಾಗದ ಮತ್ತು ಸೀಮೆಂಟ್ ಕಾರ್ಖಾನೆಗಳನ್ನು ಸ್ಥಾಪಿಸಿದರು. ಮಂಡ್ಯದಲ್ಲಿ ಸಕ್ಕರೆ ಕಾರ್ಖಾನೆ, ಬೆಳಗೊಳದಲ್ಲಿ ರಾಸಾಯನಿಕ ಮತ್ತು ಗೊಬ್ಬರ ಕಾರ್ಖಾನೆ ಹಾಗೂ ಶಿವಮೊಗ್ಗದಲ್ಲಿ ಬೆಂಕಿಕಡ್ಡಿ ಕಾರ್ಖಾನೆಯನ್ನು ಈ ಕಾಲದಲ್ಲಿಯೇ ಆರಂಭಿಸಲಾಯಿತು.[೭] ಬೃಹತ್ ಕೈಗಾರಿಕೆಯನ್ನು ಸ್ಥಾಪಿಸಿದಂತೆ ಗೃಹ ಮತ್ತು ಗ್ರಾಮೀಣ ಕೈಗಾರಿಕೆಗಳಿಗೂ ಪ್ರೋತ್ಸಾಹ ನೀಡಿದರು. ನಂಜನಗೂಡು ತಾಲ್ಲೂಕಿನ ಬದನವಾಳದಲ್ಲಿ ಖಾದಿ ಉತ್ಪಾದನಾ ಕೇಂದ್ರವನ್ನು ಸ್ಥಾಪಿಸಿದರು. ರೇಷ್ಮೆ ಕೈಗಾರಿಕೆಯ ಬೆಳವಣಿಗೆಗೆ ಸರ್ಕಾರವು ಪ್ರೋತ್ಸಾಹವನ್ನು ನೀಡುತ್ತಾ ಮೈಸೂರು ಸಂಸ್ಥಾನದ ಉತ್ಪಾದನಾ ವಸ್ತುಗಳಿಗೆ ವಿದೇಶದಲ್ಲಿ ಮಾರುಕಟ್ಟೆಯನ್ನು ಪಡೆಯುವ ಉದ್ದೇಶದಿಂದ ಮಿರ್ಜಾ ಅವರು ಲಂಡನ್ ನಗರದಲ್ಲಿ ಟ್ರೇಡ್ ಕಮೀಷನ್ನರನ್ನು ನೇಮಿಸಿದರು. ಕೃಷಿ ಉತ್ಪಾದನೆಗಳನ್ನು ಹೆಚ್ಚಿಸಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಮಂಡ್ಯ, ಮಳವಳ್ಳಿ ಮತ್ತು ಟಿ.ನರಸೀಪುರ ತಾಲ್ಲೂಕುಗಳಿಗೆ ನೀರು ಒದಗಿಸಲು ಅನುಕೂಲವಾಗುವಂತೆ ಉನ್ನತ ಕಾಲುವೆಯನ್ನು ತೋಡಲು ಆರಂಭಿಸಲಾಯಿತು. ಇದರ ಫಲವಾಗಿ ೧,೨೦,೦೦೦ ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು ಒದಗಿಸಿತು.[೮] ಮಿರ್ಜಾ ಅವರ ಕಾಲದಲ್ಲಿ ರಾಜ್ಯದಲ್ಲಿ ಸರ್ವತೋಮುಖವಾದ ಕೈಗಾರಿಕಾ ಪ್ರಗತಿ ಉಂಟಾಯಿತು. ೧೯೨೭ರಲ್ಲಿ ವೈಸರಾಯಿ ಲಾರ್ಡ್ ಇರ್ವಿನ್ ಮೈಸೂರಿಗೆ ಭೇಟಿ ನೀಡಿದ್ದನು. ಆ ಸಮಯದಲ್ಲಿ ರಾಜರು ಮತ್ತು ದಿವಾನರು ಇರ್ವಿನ್ನನಿಗೆ ಸನ್ಮಾನ ಮಾಡಿ ರಾಜ್ಯವು ಪ್ರತಿ ವರ್ಷ ಕೊಡಬೇಕಾದ ಪೊಗದಿಯ ಹಣವನ್ನು ಮೂವತ್ತೈದು ಲಕ್ಷದಿಂದ ಹತ್ತುವರೆ ಲಕ್ಷ ರೂಪಾಯಿಗಳಿಗೆ ಇಳಿಸುವಂತೆ ಇರ್ವಿನ್ನರಿಗೆ ಮನವಿ ಮಾಡಿಕೊಂಡರು. ಅದಕ್ಕೆ ಅವರು ಒಪ್ಪಿಗೆ ಸೂಚಿಸಿದರು. ಹಾಗೆ ವ್ಯವಸಾಯಕ್ಕೆ ಪ್ರೋತ್ಸಾಹ ನೀಡಲು ಅನೇಕ ಹೊಸ ಹೊಸ ಯೋಜನೆಯನ್ನು ರೂಪಿಸಲಾಯಿತು. ಶಿವನ ಸಮುದ್ರದ ಜೊತೆಗೆ ಶಿಂಷಾ

ನದಿ ವಿದ್ಯುತ್ ಉತ್ಪಾದನಾ ಕಾರ್ಯಗಾರವನ್ನು ಸ್ಥಾಪಿಸಿ ಕೈಗಾರಿಕೆಗಳಿಗೂ ಮತ್ತು ಗ್ರಾಮಗಳಿಗೂ ವಿದ್ಯುತ್ ಸರಬರಾಜನ್ನು ಮಾಡಲಾಯಿತು.[೯]

ಮಿರ್ಜಾ ಅವರು ಅನೇಕ ಆಡಳಿತ ಸುಧಾರಣೆಗಳನ್ನು ಜಾರಿಗೆ ತಂದು ೧೯೨೭ರಲ್ಲಿ ಮೈಸೂರಿನ ಜಿಲ್ಲಾ ಮಂಡಳಿಗಳ ಕಾಯ್ದೆಯನ್ನು, ತಾಲ್ಲೂಕು ಮಂಡಳಿಗಳನ್ನು ಸ್ಥಾಪಿಸಲಾಯಿತು. ಹಣಕಾಸಿನ ನಿಯಂತ್ರಣಕ್ಕೆ ಸಂಬಂಧಿಸಿದಂತೆ ಜಿಲ್ಲಾ ಮಂಡಳಿಗಳಿಗೆ ಹೆಚ್ಚಿನ ಅಧಿಕಾರವನ್ನು ವಹಿಸಲಾಯಿತು. ಅದಲ್ಲದೆ ಹೊಸ ಗ್ರಾಮ ಪಂಚಾಯತ್ ಕಾಯ್ದಿಯನ್ನು ಜಾರಿಗೆ ತರಲಾಯಿತು. ಜಿಲ್ಲಾ ಮಂಡಳಿಗಳಿಂದ ಪಂಚಾಯಿತಗಳನ್ನು ನಿಯಂತ್ರಿಸುವ ಅಧಿಕಾರವನ್ನು ಕಸಿದುಕೊಂಡು, ಪಂಚಾಯಿತಗಳನ್ನು ಸ್ಥಳೀಯ ಕಂದಾಯವನ್ನು ಸಂಗ್ರಹಿಸುವ ಅಧಿಕಾರಿಗಳ ನಿಯಂತ್ರಣಕ್ಕೆ ಗುರಿಪಡಿಸಲಾಯಿತು. ಸ್ಥಳೀಯ ಆಡಳಿತವನ್ನು ಉತ್ತಮಪಡಿಸಿ ಪುರಸಭೆಯ ಮಂಡಳಿಗಳ ಚುನಾಯಿತ ಸದಸ್ಯರನ್ನು ಹೆಚ್ಚಿಸಲಾಯಿತು. ಕಾರ್ಮಿಕರ ಪರಿಹಾರ ಕಾಯ್ದಿ ಮತ್ತು ಮಹಿಳೆಯರ ಹಕ್ಕುಗಳನ್ನು ಕುರಿತಾದ ಹಿಂದು ಕಾನೂನಿನ ತಿದ್ದುಪಡಿ ಕಾಯ್ದೆ ಜಾರಿಗೆ ತರಲಾಯಿತು. ಮೈಸೂರು ರಾಜ್ಯದ ಆರ್ಥಿಕ ಅಭಿವೃದ್ಧಿಗಾಗಿ ಮಿರ್ಜಾ ಎಂ ಇಸ್ಮಾಯಿಲ್ ಅಪಾರವಾದ ಉತ್ಸಾಹದಿಂದ ಶ್ರಮಿಸಿದರು. ಗೊಬ್ಬರಗಳ ಬಳಕೆಯನ್ನು ಪ್ರಚಲಿತಗೊಳಿಸಲು ಅನೇಕ ಇಲಾಖೆಗಳನ್ನು, ಸೃಷ್ಟಿಸಿ ಕೃಷಿ ಶಿಕ್ಷಣಕ್ಕೆ ವಿಶೇಷ ಗಮನವನ್ನು ನೀಡಲಾಯಿತು. ಮೈಸೂರಿನ ಭೂಕಂದಾಯ ಪದ್ಧತಿಯಲ್ಲಿದ್ದ ನ್ಯೂನತೆಗಳನ್ನು ನಿವಾರಿಸಲು ಕ್ರಮಗಳನ್ನು ಕೈಗೊಳ್ಳಲಾಗಿ ೧೯೨೭ರಲ್ಲಿ ಭೂಕಂದಾಯ ಹಕ್ಕುಗಳ ದಾಖಲೆ ಕಾಯಿದೆಯನ್ನು ಜಾರಿಗೆ ತರಲಾಯಿತು.

ಶಿಕ್ಷಣ ಕ್ಷೇತ್ರದಲ್ಲಿ ಪ್ರಾಥಮಿಕ ಶಿಕ್ಷಣ ಕಾಯಿದೆ ಜಾರಿಗೆ ತಂದು ರಾಜ್ಯ ಸರ್ಕಾರವು ಪ್ರಾಥಮಿಕ ಶಿಕ್ಷಣಕ್ಕೆ ಧನಸಹಾಯ ಒದಗಿಸುವ ಜವಾಬ್ದಾರಿಯನ್ನು ಸ್ಥಳೀಯ ಸಂಘಗಳಾದ ಜಿಲ್ಲಾ ಮಂಡಳಿ ಹಾಗೂ ತಾಲೂಕು ಮಂಡಳಿಗಳಿಗೆ ವಹಿಸಿತು. ಮೊದಲ ಬಾರಿಗೆ ಪ್ರಾಯೋಗಿಕ ಕ್ರಮವಾಗಿ ಪ್ರೌಢಶಾಲೆಗಳಲ್ಲಿ ಕನ್ನಡವನ್ನು ಶಿಕ್ಷಣ ಮಾಧ್ಯಮವಾಗಿ ಜಾರಿಗೆ ತರಲು ಶ್ರಮಿಸಲಾಯಿತು. ಮೈಸೂರು ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರು ಕೂಡ ಜನರ ಹಿತಾಸಕ್ತಿಗೆ ಅನುಗುಣವಾಗಿ ಶಿಕ್ಷಣದ ಪ್ರಗತಿಗೆ ಹೊಸ ಹೊಸ ಯೋಜನೆ ಮುಖಾಂತರ ಶಿಕ್ಷಣಕ್ಕೆ ಭದ್ರವಾದ ಬುನಾದಿ ಹಾಕಿದರು.[೧೦]

ಮಿರ್ಜಾ ಅವರ ಕಾಲದಲ್ಲಿ ಬೆಂಗಳೂರು ಹಾಗೂ ಇನ್ನಿತರ ಸ್ಥಳಗಳಿಗೆ ಸಂಪರ್ಕವನ್ನು ಕಲ್ಪಿಸಲು ಉತ್ತಮ ರಸ್ತೆಗಳನ್ನು ನಿರ್ಮಿಸಲಾಯಿತು. ರಾಜ್ಯದ ಪ್ರಮುಖ ನಗರಗಳಿಗೆ ದಾರಿ ದೀಪಗಳನ್ನು ಹಾಕಿಸಲಾಯಿತು. ನಗರದ ನೈರ್ಮಲ್ಯ ವ್ಯವಸ್ಥೆಯನ್ನು ವ್ಯವಸ್ಥಿತಗೊಳಿಸಲಾಯಿತು. ಇವರು ಕೊಡುಗೈ ದಾನಿಗಳನ್ನು ಗುರುತಿಸಿ ಆಸ್ಪತ್ರೆಗಳು, ಹೆರಿಗೆ ಕೊಠಡಿಗಳು, ವಿದ್ಯಾರ್ಥಿ ನಿಲಯಗಳು ಹಾಗೂ ಶಾಲೆಗಳನ್ನು ಸ್ಥಾಪಿಸಲು ಅವರ ನೆರವನ್ನು ಪಡೆಯುತ್ತಿದ್ದರು. ಸೌಂದರ್ಯಪ್ರಿಯರಾಗಿದ್ದ ಮಿರ್ಜಾ ಬೆಂಗಳೂರು ಮತ್ತು ಮೈಸೂರು ನಗರವನ್ನು ಸುಂದರಗೊಳಿಸಲು ಪ್ರಯತ್ನಿಸಿದರು. ಇವರು ಕೃಷ್ಣರಾಜ ಸಾಗರದ ಹಿಂಭಾಗದಲ್ಲಿರುವ

ಜಗತ್ಪ್ರಸಿದ್ಧ ವಿದ್ಯುತ್ ಅಲಂಕೃತ ಬೃಂದಾವನವನ್ನು ನಿರ್ಮಿಸಲು ಕಾರಣರಾಗಿದ್ದರಿಂದ ಇದು ಪ್ರಸಿದ್ಧ ಮನರಂಜನಾ ಹಾಗೂ ಪ್ರವಾಸಿ ಕೇಂದ್ರವಾಯಿತು. ಗಾಂಧೀಜಿಯವರ ಬಗ್ಗೆ ಇವರು ಗೌರವ ಇಟ್ಟುಕೊಂಡಿದ್ದು ಮೈಸೂರು ಸಂಸ್ಥಾನಕ್ಕೆ ಬಂದು ನಂದಿಬೆಟ್ಟದ ಮೇಲೆ ಕೆಲಕಾಲವಿರುವಂತೆ ಗಾಂಧೀಜಿಯವರಿಗೆ ಆಹ್ವಾನವನ್ನು ಕಳುಹಿಸಿದರು. ಇವರ ಆಹ್ವಾನವನ್ನು ಒಪ್ಪಿಕೊಂಡ ಮಹಾತ್ಮರು ೧೯೨೭ರಲ್ಲಿ ಬೆಂಗಳೂರಿಗೆ ಬಂದು ನಂದಿ ಗಿರಿಧಾಮದಲ್ಲಿ ಕೆಲಕಾಲ ತಂಗಿದ್ದರು.[೧೧]

ಮಿರ್ಜಾ ಅವರು ೧೯೩೦ ರಿಂದ ೧೯೩೨ರವರೆಗೆ ಇಂಗ್ಲೆಂಡಿನಲ್ಲಿ ನಡೆದ ದುಂಡುಮೇಜಿನ ಪರಿಷತ್ತುಗಳಲ್ಲಿ ದಕ್ಷಿಣ ಭಾರತದ ದೇಶೀಯ ಸಂಸ್ಥಾನಗಳ ಪ್ರತಿನಿಧಿಯಾಗಿ ಭಾಗವಹಿಸಿದರು.[೧೨] ಆ ಕಾಲದಲ್ಲಿ ಭಾರತದಲ್ಲಿ ರಾಷ್ಟ್ರೀಯ ಚಳುವಳಿಯ ಘಟನೆಗಳು ಬಿರುಸಾಗಿ ನಡೆದಿದ್ದು ಮೈಸೂರು ರಾಜ್ಯದಲ್ಲೂ ಸಾರ್ವಜನಿಕ ಅಭಿಪ್ರಾಯವು ಹೆಚ್ಚು ಸ್ಪಷ್ಟವಾಗಿ ಸರ್ಕಾರವು ಟೀಕೆಗಳನ್ನು ಎದುರಿಸಬೇಕಾಯಿತು. ಮಿರ್ಜಾ ಅಧಿಕಾರ ವಹಿಸಿಕೊಂಡ ಪ್ರಾರಂಭದಲ್ಲಿ ಆರ್ಥಿಕ ಒತ್ತಡದಿಂದ ರಾಜ್ಯವು ಪಾರಾಗಿ ಕೈಗಾರಿಕೆ ಮತ್ತು ವ್ಯವಸಾಯ ಕ್ಷೇತ್ರಗಳಲ್ಲಿ ವಿಶೇಷ ಪ್ರಗತಿಯಾಗಿ ಮೈಸೂರು ಮಾದರಿ ಸಂಸ್ಥಾನ ಎಂದು ಖ್ಯಾತಿಯನ್ನು ಗಳಿಸಿತು.[೧೩]

ಮಿರ್ಜಾ ಅವರ ಆರ್ಥಿಕ ನೀತಿಯನ್ನು, ಸರಳವಾಗಿ "ಸ್ವದೇಶಿ ಆರ್ಥಿಕ ನೀತಿ" ಎಂದು ಹೇಳಬಹುದು. ಅವರು ಬ್ರಿಟಿಶ್ ಅರಸರನ್ನು ಹಂಗಿಸಲೋ ಎಂಬಂತೆ ಒಮ್ಮೆ ಘೋಷಿಸಿದರು. "ಈ ಸ್ವದೇಶಿ ತತ್ವವು ಎಲ್ಲರಿಗೂ ಪ್ರಯೋಜನಕಾರಿಯೆಂಬ ಹಿನ್ನೆಲೆಯಲ್ಲಿ ನೋಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಒಬ್ಬ ಕಲಾವಿದ ಮೈಸೂರಿನ ತನ್ನ ಬಟ್ಟೆಯನ್ನು ಕೊಂಡರೆ ಬಟ್ಟೆ ಗಿರಿಣಿಯವನು ಮೈಸೂರಿನಲ್ಲಿ ಬೆಳೆದ ಹತ್ತಿಯನ್ನು ಕೊಂಡರೆ ಆದಾಯ ಹೆಚ್ಚುತ್ತದೆ... ಸರ್ಕಾರ ತೆರಿಗೆಯನ್ನು ಕಮ್ಮಿ ಮಾಡಬಹುದು ಹೀಗೆ ಈ ಅನುಕೂಲ ಸರ್ವವ್ಯಾಪ್ತಿಯಾಗುತ್ತದೆ. ಆದ್ದರಿಂದ ನಾವೆಲ್ಲ ಮೈಸೂರು ಸ್ವದೇಶಿ ವ್ಯಾಪಾರದ ವೃತ್ತ ಒಂದನ್ನು ರಚಿಸೋಣ, ನಮ್ಮ ಪ್ರೀತಿಯ ರಾಜ್ಯದ ಪ್ರಗತಿಯ ಚಕ್ರ ಅವಿರತವಾಗಿ ಸುತ್ತುವಂತೆ ಮಾಡಲು ನಾವೆಲ್ಲರೂ ಕೈಗೂಡಿಸೋಣ". ಮಿರ್ಜಾ ಅವರ ಸ್ವದೇಶಿ ಧೋರಣೆಗೆ ಗಾಂಧೀಜಿ ಬಹಳ ಮೆಚ್ಚಿಗೆ ವ್ಯಕ್ತಪಡಿಸಿದರು. ಗಾಂಧೀಜಿಯವರ ಪ್ರಿಯವಾದ ರಚನಾತ್ಮಕ ಕಾರ್ಯಕ್ರಮಗಳೆಲ್ಲವೂ ಮೈಸೂರಿನಲ್ಲಿ ಅನುಷ್ಠಾನಗೊಂಡಿದ್ದವು. ಆ ಬಗ್ಗೆ ಗಾಂಧೀ ಎಷ್ಟು ಸಂತುಷ್ಟರಾಗಿದ್ದರೆಂದರೆ ಮೈಸೂರನ್ನು ತಮ್ಮ ಕನಸಿನ "ರಾಮರಾಜ್ಯ"ಕ್ಕೆ ಕೃಷ್ಣರಾಜರನ್ನು "ರಾಜರ್ಷಿ"ಗೆ ಹೋಲಿಸಿ ತಮ್ಮ ಹರಿಜನ ಪತ್ರಿಕೆಯಲ್ಲಿ ಲೇಖನ ಬರೆದರು.

ಮಿರ್ಜಾ ಅವರಿಗೆ ಮಹಾರಾಜರ ರಾಜ್ಯದ ನಿರಂಕುಶ ಅಧಿಕಾರದಲ್ಲಿ ಅಚಲ ನಂಬಿಕೆಯಿತ್ತು. ನಿರಂಕುಶ ಪ್ರವೃತ್ತಿ ಪೂರ್ಣ ಜನವಿರೋಧಿಯಾದುದಲ್ಲ. ಆದರೆ ಜನತಂತ್ರ ವಿರೋಧಿಯಾಗಿತ್ತು. ಜನರಲ್ಲಿ ಬೆಳೆಯುತ್ತಿದ್ದ ಜನತಾಂತ್ರಿಕತೆ ಆಶಯಗಳ ಬಗ್ಗೆ ಮಿರ್ಜಾರಿಗೆ ಸಹಾನುಭೂತಿಯಿರಲಿಲ್ಲ. ಈ

ಬೆಳವಣಿಗೆಯನ್ನು ಕಂಡು ಹೌಹಾರುತ್ತಿದ್ದರು. ಮಿರ್ಜಾ ಪ್ರಜಾಪ್ರಭುತ್ವದಲ್ಲಿ ನಂಬಿಕೆಯಿದ್ದವರಲ್ಲ. ಭಾರತದಲ್ಲಿ ನೈಜವಾದ ಜನತಾಂತ್ರಿಕ ಜಾಗೃತಿಯಾಗಿದೆಯೆಂದು ಮಿರ್ಜಾ ಕಡೆಯ ತನಕ ಒಪ್ಪಲಿಲ್ಲ.

ಮಿರ್ಜಾ ಯಾವುದೇ ಜನತಾಂತ್ರಿಕ ಪ್ರತಿಭಟನೆಯನ್ನು "ಗೂಂಡಾಗಿರಿ" ಎಂದೇ ಜರಿಯುತ್ತಿದ್ದರು. ದಿವಾನರಾಗಿ ಮಿರ್ಜಾ ಎದುರಿಸಿದ ಆನೆ ಅಂಬಾರಿಯ ಪ್ರಕರಣ, ಗಣಪತಿ ಗಲಭೆ ಪ್ರಕರಣ, ರಾಜಕಾರಣಿಗಳ ಜಾತಿವಾದ ಮತ್ತು ಕೋಮುವಾದಿ ನಿಲುವುಗಳು ಮತ್ತು ಹತ್ತಾರು ರಾಜಕೀಯ ಬೆಳವಣಿಗೆಗಳು ದಿವಾನರನ್ನೆ ಗುರಿಯಾಗಿಟ್ಟುಕೊಂಡು ವಿರೋಧಿಸುತ್ತಿದ್ದದ್ದು ಬಹುಶಃ ಅವರ ಈ ನಿಲುವಿಗೆ ಕಾರಣವಾಗಿರಬಹುದು. ಒಡೆಯ ಮಹಾರಾಜರ ಮತ್ತು ತನ್ನ ಅಧಿಕಾರವನ್ನು ಪ್ರಶ್ನಿಸುವ ಯಾರನ್ನೂ ಮಿರ್ಜಾ ಸಹಿಸುತ್ತಿರಲಿಲ್ಲ ಆದ್ದರಿಂದಲೇ ಅವರು ಬಹಿರಂಗ ಸಭೆ ನಡೆಸಲು, ಬಾವುಟಗಳನ್ನು ಹಾರಿಸಲು ಕೂಡ ಅನುಮತಿ ನಿರಾಕರಿಸುತ್ತಿದ್ದರು. ಭಾರತ ರಾಷ್ಟ್ರೀಯ ಕಾಂಗ್ರೆಸ್ ಹೊರಗಿನ ಪರಕೀಯರ ಸಂಸ್ಥೆಯೆಂದೇ ಅವರ ಅಭಿಮತ. ಯಾಕೆಂದರೆ ಒಮ್ಮೆ ಅದನ್ನು ದೇಶಿ ಎಂದು ಒಪ್ಪಿದರೆ ಮೈಸೂರಿನಲ್ಲಿ ಅದರ ಚಟುವಟಿಕೆಗಳನ್ನು ಮಾನ್ಯ ಮಾಡಬೇಕಾಗುತ್ತದೆಂದು ಭಾವಿಸಿದರು.[೧೪]

ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ ಅನಾದರ ಹೊಂದಿದ್ದ ಹಾಗೂ ಸರ್ವಾಧಿಕಾರ ಮನೋಭಾವದ ಮಿರ್ಜಾ ಜನತೆಯಿಂದ ಹೆಚ್ಚು ಟೀಕೆಗೆ ಗುರಿಯಾದರು. ದಿನ ಕಳೆದಂತೆ ಸ್ವಾತಂತ್ರ್ಯ ಹೋರಾಟಗಾರರ ಹೋರಾಟ ಉಗ್ರಸ್ವರೂಪವನ್ನು ಪಡೆದು ಪರಿಸ್ಥಿತಿ ಬಿಗಡಾಯಿಸಿತು. ಸೈಮನ್ ಕಮಿಷನ್ ಬಹಿಷ್ಕಾರ, ಉಪ್ಪಿನ ಸತ್ಯಾಗ್ರಹ ಮುಂತಾದ ಪ್ರತಿಭಟನೆಗಳಿಂದ ಸ್ವಾತಂತ್ರ್ಯ ಹೋರಾಟ ದಿನದಿಂದ ದಿನಕ್ಕೆ ತೀವ್ರವಾಗುತ್ತಾ ಹೋಯಿತು. ಬೆಂಗಳೂರಿನ ಜನಜೀವನವೇ ಇದರಿಂದ ಅಸ್ತವ್ಯಸ್ತವಾಯಿತು. ಬ್ರಾಹ್ಮಣೇತರ ನಾಯಕರಾದ ಸರ್ವಶ್ರೀ ಟಿ.ಸಿದ್ದಲಿಂಗಯ್ಯ, ಎಚ್.ಸಿ.ದಾಸಪ್ಪ, ಡಿ.ಎಚ್.ಚಂದ್ರಶೇಖರಯ್ಯ ಮುಂತಾದವರು ಸರ್ಕಾರವನ್ನು ಕಟುವಾಗಿ ಟೀಕಿಸಿದರು. ಸ್ವಾತಂತ್ರ್ಯ ಹೋರಾಟದ ಪ್ರತಿಭಟನಾ ಹಾಗೂ ಧ್ವಜರೋಹಣ ಸಭೆಗಳು ರಾಜ್ಯಾದ್ಯಂತ ನಡೆದಿದ್ದವು.[೧೫] ಕಾಂಗ್ರೆಸ್ಸಿನ ಶಿವಪುರ ಧ್ವಜಸತ್ಯಾಗ್ರಹ, ವಿದುರಾಶ್ವತ್ಥದ ಘಟನೆ, ಅರಣ್ಯ ಚಳವಳಿ ಮತ್ತು ಚುನಾವಣೆಗಳಲ್ಲಿ ಕಾಂಗ್ರೆಸ್ ಬಾರಿಸಿದ ಜಯಬೇರಿಗಳು ಮಿರ್ಜಾರನ್ನು ಕ್ರುದ್ಧರನ್ನಾಗಿಸಿದವು. ಬದಲಾದ ಪರಿಸ್ಥಿತಿಗೆ ಹೊಂದಿಕೊಳ್ಳುವ ಬದಲಾಗಿ, ಆತ ರಾಷ್ಟ್ರೀಯ ಶಕ್ತಿಗಳನ್ನು ದ್ವೇಷಿಸತೊಡಗಿದ್ದು ವಿಪರ್ಯಾಸ. ರಾಷ್ಟ್ರೀಯ ಶಕ್ತಿಗಳ ಯಾವುದೇ ಯಶಸ್ಸು ಮಹಾರಾಜರ ಸ್ಥಾನವೂ ಸೇರಿದಂತೆ, ಸರ್ವಾಧಿಕಾರ, ನಿರಂಕುಶತೆಗಳ ಅವನತಿಗೆ ದ್ಯೋತಕವೆಂದು ಮಿರ್ಜಾ ವಾದಿಸಿದ್ದು ಸರಿಯೇ. ಮೈಸೂರು ಆಡಳಿತ, ವಿದುರಾಶ್ವಥದ ಅಮಾಯಕ ಜನರ ಮೇಲೆ ನಡೆಸಿದ ಅಮಾನುಷ ಹಲ್ಲೆ ಮತ್ತು ಗೋಲಿಬಾರ್ ರಾಷ್ಟ್ರೀಯ ಕಾಂಗ್ರೆಸ್ಸಿನ ಕಣ್ಣು ತೆರೆಸಿತು. ಮೈಸೂರನ್ನು ರಾಮರಾಜ್ಯವೆಂದು ಹೊಗಳಿದ್ದ ಗಾಂಧೀಜಿಯೇ ಈಗ ಮಿರ್ಜಾ ಅವರನ್ನು ಸಂಪರ್ಕಿಸಿ ಜನಪ್ರತಿನಿಧಿಗಳಿಗೆ ಅಧಿಕಾರ ವಹಿಸಿಕೊಡಬೇಕೆಂದು ಹೇಳಿದರು. ಆದರೆ ಮಿರ್ಜಾ ಅವರ ಮಾತಿಗೆ ಸೊಪ್ಪು ಹಾಕಲಿಲ್ಲ. ಕಾಂಗ್ರೆಸ್ಸಿನ ಸವಾಲನ್ನು ಎದುರಿಸಲು ಅವರು ಸಿದ್ಧರಿದ್ದರು. ಕಾಂಗ್ರೆಸ್

ನೇತೃತ್ವದ ಚಟುವಟಿಕೆಯನ್ನು ಹತ್ತಿಕ್ಕಲು ಮಾಡಬಾರದ ಕೆಲಸವನ್ನೆಲ್ಲಾ ಮಾಡಲಾಯಿತು. ಅದು ಪ್ರಬಲ ಕಾಂಗ್ರೆಸ್ ಹುರಿಯಾಳುಗಳ ಹೆಸರನ್ನು ಮತದಾರರ ಪಟ್ಟಿಯಿಂದ ತೆಗೆಯುವುದರಿಂದ ಮೊದಲುಗೊಂಡು, ಅಂಥವರ ನಾಮಪತ್ರಗಳನ್ನು ತಿರಸ್ಕರಿಸುವುದು, ಕಾಂಗ್ರೆಸ್ ಅಭ್ಯರ್ಥಿಗಳಿಂದ ಸೋತು ನೆಲಕಚ್ಚಿದ ಸರ್ಕಾರಿ ಚೇಲಾಗಳನ್ನು ನಾಮಕರಣ ಮಾಡಿ ಮಂತ್ರಿಗಿರಿಗೇರಿಸುವವರೆಗೆ ಹಬ್ಬಿತ್ತು.

ಮಿರ್ಜಾ ಸಾರ್ವಜನಿಕ ಅಭಿಪ್ರಾಯದೊಂದಿಗೆ ರಾಜಿಯಾಗಲು ಸಿದ್ಧರಿರಲಿಲ್ಲ. ನಾಲ್ವಡಿ ಕೃಷ್ಣರಾಜರು ಇದುವರೆಗೂ ದಿವಾನರು ಏನು ಮಾಡಿದರೂ ಬೆಂಬಲ ಕೊಟ್ಟಿದ್ದರು. ಮಿರ್ಜಾರಲ್ಲಿ ಮಹಾರಾಜರಿಗಿದ್ದ ನಂಬಿಕೆಯೇ ಅಂಥದ್ದು. ಆದರೆ ಆ ಮಹಾರಾಜರ ನಿಧನದ ನಂತರ ಮಿರ್ಜಾ ಎಲ್ಲವನ್ನೂ ಕಳೆದುಕೊಂಡಂತಾದರು. ತನ್ನ ಜೀವನದ ಒಂದು ಅಧ್ಯಾಯ ಮುಗಿಯಿತು, ಮುಂದಿನದನ್ನು ಹೇಗೆ ಎದುರಿಸಬೇಕೋ ತಿಳಿಯದು ಎಂದು ಅವರು ಗಾಂಧೀಜಿಗೆ ಪತ್ರ ಬರೆದರು. ಆಗ ಪಟ್ಟಕ್ಕೆ ಬಂದ ಮಹಾರಾಜ ಜಯಚಾಮರಾಜೇಂದ್ರ ಒಡೆಯರಿಗೆ ಆಳವಾಗಿ ಬೇರುಬಿಟ್ಟಿದ್ದ ದಿವಾನ ಮಿರ್ಜಾರನ್ನು ಕಂಡರೆ ಅಷ್ಟಕಷ್ಟೆ. ಅವರೊಡನೆ ಹೆಚ್ಚು ಕಾಲ ಮುಂದುವರಿಯಲು ಆಗದೆ, ಮಿರ್ಜಾ ರಾಜಿನಾಮೆಯಿತ್ತರು. ಬ್ರಿಟಿಶ್ ವೈಸರಾಯ್ ಮತ್ತು ರೆಸಿಡೆಂಟರು ರಾಜಿನಾಮೆ ವಾಪಸ್ಸು ಪಡೆಯಲು ಸಲಹೆ ಮಾಡಿದರೂ ಅದಕ್ಕೆ ಮಿರ್ಜಾ ಒಪ್ಪಲಿಲ್ಲ.[೨]

## ೪.೨. ಜಯಪುರ ಸಂಸ್ಥಾನ

ಸರ್.ಮಿರ್ಜಾ ತುಂಬಾ ದಕ್ಷ ಆಡಳಿತಗಾರ ಎಂಬುದಾಗಿ ಖ್ಯಾತಿ ಗಳಿಸಿದ್ದರು. ಆದ್ದರಿಂದಲೇ ಮೈಸೂರು ಸಂಸ್ಥಾನದ ದಿವಾನ ಪದವಿಯಿಂದ ನಿವೃತ್ತರಾಗುತ್ತಲೇ ಅವರ ಅನುಭವ ಪ್ರಯೋಜನೆ ಪಡೆಯಲು ಭಾರತ ಸರ್ಕಾರ ಮತ್ತು ಅನೇಕ ಸಂಸ್ಥಾನಗಳಿಂದ ಅವರಿಗೆ ಆಹ್ವಾನ ಬರತೊಡಗಿದವು. ಫ್ರಾನ್ಸಿನಲ್ಲಿ ಭಾರತದ ಹೈಕಮೀಷನ್‌ರಾಗಿರಲು ಇಂಡಿಯ ಸರ್ಕಾರ ಆಹ್ವಾನಕೊಟ್ಟಿತು. ಆದರೆ ಮಿರ್ಜಾ ಒಪ್ಪಿಕೊಳ್ಳಲಿಲ್ಲ. ಕಾಶ್ಮೀರ, ಹೈದರಾಬಾದ್, ಬರೋಡ, ಭಾಗಲ್ಪುರ, ಜಯಪುರ ಆಹ್ವಾನ ನೀಡಿದ ಸಂಸ್ಥಾನಗಳಲ್ಲಿ ಪ್ರಮುಖವಾದವು.

ಬರೋಡ ಮಹಾರಾಜರು ಮೈಸೂರು ಮಹಾರಾಜರ ನಿಕಟ ಸ್ನೇಹಿತರಾಗಿದ್ದರು. ಒಂದೆರಡು ಸಲ ಅವರು ಮೈಸೂರಿಗೆ ದಯಮಾಡಿಸಿದ್ದರು. ಅವರ ಭೇಟಿಯ ಜ್ಞಾಪಕಾರ್ಥವಾಗಿ ಮೈಸೂರು ನಗರದ ಒಂದು ಮುಖ್ಯ ಬೀದಿಗೆ ಸಯ್ಯಾಜಿರಾವ್ ರಸ್ತೆ ಎಂದು ಹೆಸರಿಡಲಾಗಿದೆ. ಮೈಸೂರಿನ ಪ್ರಗತಿಗೆ ಮಹಾರಾಜರು ಮತ್ತು ಅವರ ದಕ್ಷ ದಿವಾನರು ಮುಖ್ಯ ಕಾರಣವೆಂದು ಅವರು ಮನಗಂಡಿದ್ದರು. ಮಿರ್ಜಾ ಅವರ ಸೇವೆ ಪಡೆಯಲು ಅವರು ತುಂಬಾ ಆಸಕ್ತರಾಗಿದ್ದರು. ಆರು ಸಾವಿರ ರೂಪಾಯಿ ಮಾಸಿಕ ವೇತನ, ಉಚಿತ, ನಿವಾಸ, ಉಚಿತ ವಾಹನ ಮತ್ತು ಇತರ ಸೌಲಭ್ಯಗಳನ್ನು ಒದಗಿಸಿಕೊಡಲು ಅವರು ಸಿದ್ಧರಾಗಿದ್ದರು.

ಸುಂದರ ಕಾಶ್ಮೀರದಿಂದಲೂ ಅವರಿಗೆ ಕರೆ ಬಂದಿತು. ಅಲ್ಲಿನ ಮಹಾರಾಜರೂ ಹಿಂದೂ ಧರ್ಮೀಯರಾಗಿದ್ದರು. ಆದರೆ ಸಂಸ್ಥಾನದ ಪ್ರಜೆಗಳು ಮುಸ್ಲಿಮರಾಗಿದ್ದರು. ಆ ಸಂಸ್ಥಾನಕ್ಕೆ ದಿವಾನರಾಗಿ

ಬರಬೇಕೆಂದು ವಿಮಾನದಲ್ಲಿ ಒಬ್ಬ ಗಣ್ಯ ವ್ಯಕ್ತಿಯ ಮೂಲಕ ಮಹಾರಾಜರು ಆಹ್ವಾನ ಕಳುಹಿಸಿ ಆಡಳಿತದಲ್ಲಿ ನಿಮಗೆ ಪೂರ್ಣ ಸ್ವತಂತ್ರವಿರುತ್ತದೆ, ನಮ್ಮ ಸಂಸ್ಥಾನಕ್ಕೆ ಬನ್ನಿ ಎಂದು ತಿಳಿಸಿದರು. ಆದರೆ ಬೆಂಗಳೂರಿನಿಂದ ಅಷ್ಟು ದೂರಕ್ಕೆ ಹೋಗಲು ಅವರಿಗೆ ಇಷ್ಟವಿರಲಿಲ್ಲ. ಇಂಡಿಯ ಸರ್ಕಾರದ ರಾಜಕೀಯ ವಿಭಾಗದ ಕಾರ್ಯದರ್ಶಿ ಕೆನೆಟ್ ಫಿಜ್ಜೆ ಮತ್ತು ಮಾನ್ಯ ಶ್ರೀ ವಿ.ಎಸ್.ಶ್ರೀನಿವಾಸಶಾಸ್ತ್ರಿಗಳೊಡನೆ ಸಮಾಲೋಚನೆ ನಡೆಸಿ ಕಾಶ್ಮೀರಕ್ಕೆ ಹೋಗುವುದು ಬೇಡ ಎಂದು ನಿರ್ಧರಿಸಿದರು. ಹೈದರಾಬಾದ್‌ನಿಂದ ನಿವೃತ್ತರಾದ ಮೇಲೆ ಕಾಶ್ಮೀರದಿಂದ ಮತ್ತೊಂದು ಬಾರಿ ಕರೆ ಬಂದಿತು. ಆಗಿನ ಪರಿಸ್ಥಿತಿ ತುಂಬಾ ವಿಷಮವಿತ್ತು ಹಾಗೂ ಚಿಂತಾಜನಕವಾಗಿತ್ತು. ಸರ್.ಎನ್.ಗೋಪಾಲಸ್ವಾಮಿ ಅಯ್ಯಂಗಾರರು ಈಗಿನ ಸಂದಿಗ್ಧ ಪರಿಸ್ಥಿತಿಯಲ್ಲಿ ಹೋಗುವುದು ಬೇಡ ಎಂದು ಹೇಳಿದರು. ಆದ್ದರಿಂದ ಮಿರ್ಜಾ ಎರಡನೆಯ ಆವರ್ತಿಯಲ್ಲೂ ಹೋಗಲಿಲ್ಲ.

ಜಯಪುರದಿಂದಲೂ ಆಹ್ವಾನ ಬಂದಿತ್ತು. ಜಯಪುರ ಸಣ್ಣ ಸಂಸ್ಥಾನ. ಆದರೆ ಮಿರ್ಜಾ ಅವರಿಗೆ ಜಯಪುರ ಸಂಸ್ಥಾನದ ಮಹಾರಾಜರ ಜೊತೆ ಒಳ್ಳೆಯ ಸಂಬಂಧವಿತ್ತು. ಈ ಕಾರಣದಿಂದ ಒಂದು ವರ್ಷ ಕಾಲ ಮಾತ್ರ ದಿವಾನರಾಗಲು ಒಪ್ಪಿಕೊಂಡು ಜಯಪುರಕ್ಕೆ ಹೋದವರು ಮಹಾರಾಜರ ಬಲವಂತಿಕೆಯಿಂದ ನಾಲ್ಕು ವರ್ಷ ಕಾಲ ೧೯೪೨ ರಿಂದ ೧೯೪೬ರವರೆಗೆ ಜಯಪುರದಲ್ಲಿ ದಿವಾನರಾಗಿದ್ದರು. ಆಡಳಿತದಲ್ಲಿ ಮಹಾರಾಜರು ಇವರಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟಿದ್ದರು. ಒಂದು ವರ್ಷದ ಅವಧಿಯಲ್ಲಿ ಮಿರ್ಜಾ ಅವರ ಆಡಳಿತದಿಂದ ಸಂತೃಪ್ತರಾದ ಮಹಾರಾಜರು ಇನ್ನೂ ಕೆಲವು ಕಾಲ ಇರುವಂತೆ ಕೇಳಿಕೊಂಡರು.[೧೭] ಮೈಸೂರು ಸಂಸ್ಥಾನವನ್ನು ರಾಜಕೀಯವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ ಹಾಗೂ ಶೈಕ್ಷಣಿಕವಾಗಿ ಪ್ರಗತಿಯುತ್ತ ಕೊಂಡೊಯ್ದು, ಅದೇ ರೀತಿ ಕೃಷಿ, ನೀರಾವರಿ, ಹೈನುಗಾರಿಕೆ, ಬೃಹತ್ ಕೈಗಾರಿಕೆ, ಗೃಹ ಮತ್ತು ಗುಡಿ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಿ ಏಳಿಗೆಗೆ ತುಂಬಾ ಶ್ರಮವಹಿಸಿದ್ದರಿಂದ ಈ ಕಾರ್ಯಗಳಿಗೆ ಮಾರು ಹೋಗಿ ಮಿರ್ಜಾರವರಿಂದ ಜಯಪುರ ಸಂಸ್ಥಾನವು ಕೂಡ ಈ ಮಾದರಿಯಲ್ಲಿಯೇ ಅಭಿವೃದ್ಧಿಯಾಗಬೇಕು ಎಂಬ ಅಭಿಲಾಶೆಯನ್ನು ಜಯಪುರ ಸಂಸ್ಥಾನದ ಮಹಾರಾಜರು ಹೊಂದಿದ್ದರು.[೧೮] ಮಹಾರಾಜರು ತನ್ನ ದಿವಾನನಿಗೆ ಪೂರ್ಣ ಬೆಂಬಲ ಕೊಡುತ್ತಿದ್ದರು. ಸ್ವಾರ್ಥಿಗಳು ಮಹಾರಾಜರ ಮನಸ್ಸನ್ನು ಕೆಡಿಸಲು ಪ್ರಯತ್ನಿಸಿ ವಿಫಲರಾಗುತ್ತಿದ್ದು,ಜಯಪುರ ಸಂಸ್ಥಾನದಲ್ಲಿ ಮಿರ್ಜಾ ಅವರ ಏಳಿಗೆಯನ್ನು ಹಾಗೂ ಮಹಾರಾಜರೊಂದಿಗಿನ ಅವರ ಅನ್ಯೋನ್ಯತೆಯನ್ನು ಸಹಿಸದ ಕೆಲವರು ಪಿತೂರಿ ಆರಂಭಿಸಿದರು. ಮಿರ್ಜಾ ಅವರನ್ನು ಅಧಿಕಾರದಿಂದ ಪದಚ್ಯುತಗೊಳಿಸುವ ಪ್ರಯತ್ನವನ್ನು ನಡೆಸಲಾಯಿತು. ಆದರೆ ವಿರೋಧಿಗಳ ಸುಳಿವನ್ನು ಅರಿತಿದ್ದ ಮಿರ್ಜಾ ಈ ಬೆಳವಣಿಗೆಗಳಿಂದ ಧೃತಿಗೆಡಲಿಲ್ಲ.

ಮೈಸೂರು ಮತ್ತು ಜಯಪುರದಲ್ಲಿ ಅಧಿಕಾರದಲ್ಲಿದ್ದಾಗ ಅನೇಕ ಬ್ರಿಟಿಶ್ ಅಧಿಕಾರಿಗಳ ಜೊತೆ ಉತ್ತಮವಾದ ಸಂಬಂಧವನ್ನು ಬೆಳೆಸಿಕೊಂಡಿದ್ದರು. ಬ್ರಿಟಿಶ್ ಅಧಿಕಾರಿಗಳ ಬಗ್ಗೆ ತುಂಬಾ ವಿಶ್ವಾಸ ಹೊಂದಿದ್ದರು. ಅಂತೆಯೇ ಮಿರ್ಜಾರನ್ನು ಬ್ರಿಟಿಶ್ ಅಧಿಕಾರಿಗಳು ತುಂಬಾ ಆತ್ಮೀಯತೆಯಿಂದ ನೋಡುತ್ತಿದ್ದರು.

"ಬ್ರಿಟಿಶರು ತುಂಬಾ ನಿಧಾನಿಗಳು, ಸಂಪ್ರದಾಯವಾದಿಗಳು, ಚಂಚಲ ಹೃದಯಿಗಳಲ್ಲ, ಇತರರಿಗೆ ಕೇಡು ಬಯಸರು, ಕ್ಷಮೆಯಾಚಿಸಿದವನ ಅಪರಾಧ ಮರೆತು ಹೋಗುವ ಹಿರಿಯ ಗುಣ ಅವರದು" ಈ ರೀತಿಯಲ್ಲಿ ಬ್ರಿಟಿಶ್ ಅಧಿಕಾರಿಗಳನ್ನು ಹೊಗಳುತ್ತಾರೆ. ಮಿರ್ಜಾ ಇದು ತನ್ನ ಅನುಭವದಿಂದ ಕಂಡುಕೊಂಡ ವಿಚಾರ ಎಂಬುದಾಗಿ ಹೇಳುತ್ತಾರೆ.

ಜಯಪುರದಲ್ಲಿ ಆಳುವವರಿಗೂ ಪ್ರಜೆಗೂ ಯಾವ ವಿಧವಾದ ಸಂಪರ್ಕವೂ ಇರಲಿಲ್ಲ. ಜನರ ಕುಂದುಕೊರತೆ, ಆಶೋತ್ತರಗಳನ್ನು ಲಕ್ಷಿಸಿ ಶಾಸನ ಮಾಡುವುದು ಮತ್ತು ಆಡಳಿತ ನಡೆಸಿಕೊಂಡು ಬರುವುದು ಅತ್ಯಗತ್ಯ ಎಂದು ಮಿರ್ಜಾ ಅರಿತಿದ್ದರು. ಪ್ರಪಂಚದ ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ತೀವ್ರಗತಿಯಲ್ಲಿ ಆಗುತ್ತಿದ್ದ ಬದಲಾವಣೆಗಳು, ಅಲ್ಲದೆ ಭಾರತದಲ್ಲಿಯೇ ಸ್ವಾತಂತ್ರ್ಯಕ್ಕಾಗಿ ನಡೆಯುತ್ತಿದ್ದ ಹೋರಾಟ ಇವೆಲ್ಲವೂ ಜಯಪುರದ ಜನತೆಯ ಮೇಲೆ ತಮ್ಮ ಪ್ರಭಾವ ಬೀರದೆ ಇರಲಿಲ್ಲ. ಪ್ರಜಾಮಂಡಲಿಯು ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ನಡೆಸುತ್ತಿತ್ತು. ಇವೆಲ್ಲವನ್ನೂ ಗಮನಿಸಿದ ಮಿರ್ಜಾ ಇಲ್ಲಿಯೂ ಜನರ ಪ್ರತಿನಿಧಿಗಳು ಕ್ರಮಕ್ರಮವಾಗಿ ಆಡಳಿತದಲ್ಲಿ ಹೆಚ್ಚು ಹೆಚ್ಚು ಆಸಕ್ತಿ ಮತ್ತು ಜವಾಬ್ದಾರಿ ವಹಿಸುವಂತೆ ಆಡಳಿತ ಪದ್ಧತಿಯನ್ನು ಬದಲಾಯಿಸುವುದು ಅಗತ್ಯವೆಂದು ಮಹಾರಾಜರಲ್ಲಿ ಕೇಳಿಕೊಂಡರು. ಮಹಾರಾಜರ ಹಾಗೂ ಜನರ ವಿಶ್ವಾಸ ಮಿರ್ಜಾ ಗಳಿಸಿಕೊಂಡಿದ್ದರೂ ಅದೇಕೋ ಇಂಡಿಯಾ ಸರ್ಕಾರದ ಮೆಚ್ಚುಗೆಗೆ ಪಾತ್ರರಾಗಲಿಲ್ಲ. ಅನವಶ್ಯ ಬಾಬುಗಳಿಗೆ ಮಿರ್ಜಾ ಹೆಚ್ಚು ಖರ್ಚು ಮಾಡುತ್ತಿದ್ದಾರೆ ಎಂಬ ಭಾವನೆ ಜನಪ್ರತಿನಿಧಿಗಳಲ್ಲಿ ಹುಟ್ಟಿಕೊಂಡಿತ್ತು.[೧೯]

ಮಿರ್ಜಾ ಎಂ ಇಸ್ಮಾಯಿಲ್‌ರು ಮೈಸೂರು ಸಂಸ್ಥಾನದ ಪ್ರಗತಿಯ ಮಾದರಿಯಂತೆ ಜಯಪುರದಲ್ಲಿ ಕೂಡ ಅಭಿವೃದ್ಧಿಯತ್ತ ಮುಖಮಾಡಿ ಜಯಪುರ ನಗರದ ಸುತ್ತ ಸುಂದರವಾದ ಪರಿಸರವನ್ನು ಬೆಳೆಸುವುದು ಹಾಗೂ ನಗರದ ನೈರ್ಮಲ್ಯ ಕಾಪಾಡಿಕೊಳ್ಳುವ ರೀತಿಯಲ್ಲಿ ಕೆಲಸ ಮಾಡಿದರು. ಜಯಪುರದ ನಗರದಲ್ಲಿ ಅಜ್ಮೀರ ಮತ್ತು ಜೈಸಲಮೀರ ಎಂಬ ಈ ಎರಡು ಸ್ಥಳಗಳನ್ನು ಸುಂದರವಾಗಿ ಹಾಗೂ ಅಚ್ಚುಕಟ್ಟಾಗಿ ಏಳಿಗೆಗೆ ಪ್ರಯತ್ನಿಸಿ ಸಫಲರಾದರು. ಹಾಗೇ ಜಯಪುರ ಸಂಸ್ಥಾನದಲ್ಲಿ ಜನತೆಗೆ ಒಂದು ವಿಶ್ವವಿದ್ಯಾಲಯದ ಅತಿ ಅವಶ್ಯಕತೆಯಿದೆ ಎಂಬುದನ್ನು ಮನಗಂಡು ರಾಜಸ್ಥಾನ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದರು.[೨೦] ಹಾಗೇ ಜಯಪುರದ ಬ್ಯಾಂಕಿನ ಸ್ಥಾಪನೆ ಹಾಗೂ ಜಯಪುರದ ಕ್ಲಬ್ಬಿನ ಕಟ್ಟಡದ ಅಸ್ತಿಭಾರ ಶಿಲೆಯ ಶಂಕುಸ್ಥಾಪನೆ ಮಿರ್ಜಾ ಎಂ ಇಸ್ಮಾಯಿಲ್ ಜಯಪುರದಲ್ಲಿ ನೆರವೇರಿಸಿದ ಕಡೆಯ ಸಾರ್ವಜನಿಕ ಕಾರ್ಯ. ಈ ಸಂದರ್ಭದಲ್ಲಿ ಬ್ಯಾಂಕಿನವರು ಮಿರ್ಜಾ ಎಂ ಇಸ್ಮಾಯಿಲ್‌ರು ಪ್ರಧಾನಿಯಾಗಿ ಕೈಗೂಡಿಸಿದ ಕಾರ್ಯಗಳ ಪಟ್ಟಿಯನ್ನು ಸಂಕ್ಷಿಪ್ತವಾಗಿ ನಮೂದಿಸಿದರು. ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಗಳ ಸ್ಥಾಪನೆ, ಮಂತ್ರಿ ಸಂಪುಟದಲ್ಲಿ ಜನತಾ ಪ್ರತಿನಿಧಿಗೆ ಒಂದು ಸ್ಥಾನ, ಪೌರಸಭೆಗಳ ಸುಧಾರಣೆ, ಶಾಸನಗಳನ್ನು ಕ್ರಮಬದ್ಧಗೊಳಿಸುವುದು. ರಾಜಾಪುಟಾಣ ವಿಶ್ವವಿದ್ಯಾಲಯ ಮತ್ತು ಜಯಪುರದ ಮೆಡಿಕಲ್ ಕಾಲೇಜಿನ

ಸ್ಥಾಪನೆಗೆ ಯಶಸ್ವಿ ಪ್ರಯತ್ನ, ಅನೇಕ ದೊಡ್ಡ ಮತ್ತು ಸಣ್ಣ ಕಾರ್ಖಾನೆಗಳ ಸ್ಥಾಪನೆಗೆ ಪ್ರೋತ್ಸಾಹ, ಲೋಹ ಪಾತ್ರ ಪದಾರ್ಥಗಳನ್ನು ತಯಾರಿಸುವ ಕಾರ್ಖಾನೆ ಹೀಗೆ ಅನೇಕ ಪ್ರಗತಿಪರ ಕೆಲಸ ಕಾರ್ಯಗಳನ್ನು ಮಾಡಿ ಯಶಸ್ವಿ ಪ್ರಧಾನಿ ಎನಿಸಿಕೊಂಡಿದ್ದರು. ಪ್ರಧಾನಿ ಸರ್ ಮಿರ್ಜಾ ಎಂ ಇಸ್ಮಾಯಿಲ್ ಅವರ ಕಾರ್ಯ ನಿರ್ವಹಣೆಯಿಂದ ಸುಪ್ರೀತರಾದ ಮಹಾರಾಜರು ಜಯಪುರದ ಸೌಂದರ್ಯಾಭಿವೃದ್ಧಿಗೆ ದುಡಿದ ನೆನಪಾಗಿ ನಗರದ ಪ್ರಧಾನ ಬೀದಿಗೆ ಮಿರ್ಜಾ ಬೀದಿ ಎಂದು ಹೆಸರಿಟ್ಟರು.[೨೧]

## ೪.೩. ಹೈದರಾಬಾದ್ ಸಂಸ್ಥಾನ

ಮಿರ್ಜಾ ಎಂ ಇಸ್ಮಾಯಿಲ್ ಮೈಸೂರಿನಲ್ಲಿ ಆಳಿದ ಖ್ಯಾತ ದಿವಾನರಲ್ಲಿ ಪ್ರಮುಖರು. ಹದಿನೈದು ವರ್ಷಗಳು ಇವರು ದಕ್ಷತೆಯಿಂದ ಕಾರ್ಯನಿರ್ವಹಿಸಿ ೧೯೪೧ರಲ್ಲಿ ನಿವೃತ್ತರಾದರು. ಇವರೊಂದಿಗೆ ಮೈಸೂರು ಇತಿಹಾಸದಲ್ಲಿ ಪ್ರಸಿದ್ಧ ದಿವಾನರ ಯುಗ ಕೊನೆಗೊಂಡಿತ್ತೆಂದು ಕೆಲವು ಇತಿಹಾಸಕಾರರು ಭಾವಿಸುತ್ತಾರೆ. ದಕ್ಷರು, ನಿಷ್ಟರು ಆಗಿದ್ದ ಮಿರ್ಜಾ ಎಂ ಇಸ್ಮಾಯಿಲ್ ಮೈಸೂರಿನ ಇತಿಹಾಸದಲ್ಲಿ ಬಹು ಕಠಿಣವಾದ ಪರಿಸ್ಥಿತಿಯಲ್ಲಿ ದಿವಾನರಾಗಿ ನೇಮಕಗೊಂಡು ರಾಜ್ಯಕ್ಕೆ ಉಪಯುಕ್ತವಾದ ಸೇವೆಯನ್ನು ಸಲ್ಲಿಸಿದರು. ಭಾರತದಲ್ಲಿ ದಕ್ಷ ಆಡಳಿತಗಾರರಾಗಿ ನಿಷ್ಠೆ, ಪ್ರಾಮಾಣಿಕತೆಗೆ ಹೆಸರುವಾಸಿಯಾಗಿದ್ದ ಮಿರ್ಜಾ ಅವರು ನಿವೃತ್ತರಾದ ಮೇಲೆ ಅನೇಕ ದೇಶೀಯ ಸಂಸ್ಥಾನಗಳು ಅವರನ್ನು ದಿವಾರನ್ನಾಗಿ ನೇಮಿಸಿಕೊಳ್ಳಲು ಮುಂದಾದವು. ಅದರಂತೆ ಮಿರ್ಜಾ ಅವರು ರಾಜಸ್ಥಾನದ ಜಯಪುರದಲ್ಲಿ ಸ್ವಲ್ಪಕಾಲ ದಿವಾನರಾಗಿದ್ದು, ಉಪಯುಕ್ತವಾದ ಸೇವೆಯನ್ನು ಸಲ್ಲಿಸಿದರು. ಇದಾದ ನಂತರ ಅವರು ಹೈದರಾಬಾದಿನ ನಿಜಾಮರ ಆಹ್ವಾನದ ಮೇರೆಗೆ ಅಲ್ಲಿ ದಿವಾನರಾಗಿ ನೇಮಕಗೊಂಡರು.

ಮಿರ್ಜಾ ಅವರ ಸ್ವಭಾವ, ಅವರ ಆಡಳಿತ ವಿಧಾನ, ಆದ್ಯತೆ ಇವುಗಳನ್ನು ಕುರಿತು ಇಲ್ಲಿ ಸಂಕ್ಷೇಪವಾಗಿ ಪ್ರಸ್ತಾಪಿಸುವುದು ಅಗತ್ಯವಾಗುತ್ತದೆ. ಮಿರ್ಜಾ ಅವರು ಬಹುಕಟ್ಟು ನಿಟ್ಟಿನ ಅಧಿಕಾರಿ ಯಾಗಿದ್ದರು. ಅವರು ನಗರಾಭಿವೃದ್ಧಿ ಮತ್ತು ಗ್ರಾಮಾಭಿವೃದ್ಧಿ ಕಾರ್ಯಗಳಿಗೆ ಹೆಚ್ಚು ಒತ್ತು ನೀಡುತ್ತಿದ್ದರು. ಅವರು ಸ್ವಚ್ಛತೆ, ಪರಿಶುದ್ಧ ವಾತಾವರಣವನ್ನು ಸ್ಥಾಪಿಸಲು ಸದಾ ಪ್ರಯತ್ನಿಸುತ್ತಿದ್ದರು.

ಮಿರ್ಜಾ ಅವರು ಹೈದರಾಬಾದಿನಲ್ಲಿ ದಿವಾನರಾಗಿ ಆಗಮಿಸಿದ ಸಂದರ್ಭದಲ್ಲಿ ಹೈದರಾಬಾದ್ ಮಾತ್ರವಲ್ಲದೆ ಭಾರತವು ಕೂಡ ರಾಜಕೀಯವಾಗಿ ಹಾಗೂ ಭೌಗೋಳಿಕವಾಗಿ ಒಂದು ಸಂದಿಗ್ಧ ಸ್ಥಿತಿಯಲ್ಲಿತ್ತು. ಸ್ವಾತಂತ್ರ್ಯ ಚಳುವಳಿಯು ಉಗ್ರ ಸ್ವರೂಪ ತಳೆದು ದೇಶವನ್ನೆಲ್ಲಾ ವ್ಯಾಪಿಸಿದ್ದಿತು. ಎರಡನೆಯ ಮಹಾಯುದ್ಧವು ಕೊನೆಗೊಂಡಿದ್ದು, ಭಾರತವು ಸ್ವತಂತ್ರವಾಗುವ ಸಮಯವು ಸನ್ನಿಹಿತವಾಗಿ ಭಾರತದ ರಾಜಕೀಯದಲ್ಲಿ ತೀವ್ರ ಸ್ವರೂಪದ ಬದಲಾವಣೆಗಳಾಗುತ್ತಿದ್ದವು.

ಹೀಗೆ ಭಾರತೀಯ ಸ್ವಾತಂತ್ರ್ಯವು ಸಮೀಪಿಸುತಿತ್ತೆಂದು ಸಂಭ್ರಮಿಸುತ್ತಿದ್ದಾಗ ಹೈದರಾಬಾದ್ ಸಂಸ್ಥಾನದಲ್ಲಿ ವಿಭಿನ್ನವಾದ ರಾಜಕೀಯ ಬೆಳವಣಿಗೆಗಳು ನಡೆಯುತ್ತಿದ್ದವು. ೧೯ ಮತ್ತು ೨೦ನೆಯ ಶತಮಾನದಲ್ಲಿ ಹೈದರಾಬಾದ್‌ನ್ನು ಆಳುತ್ತಿದ್ದ ನಿಜಾಮರು ಮಧ್ಯಕಾಲೀನ ಊಳಿಗಮಾನ್ಯ ಪದ್ಧತಿಯನ್ನು ಅನುಸರಿಸಿ ರಾಜ್ಯದ ಹಿತಾಸಕ್ತಿಯನ್ನು ಕಡೆಗಣಿಸಿದ್ದರು. ಬ್ರಿಟಿಶರಿಗೆ ಅಧೀನರಾಗಿ ಸಾರ್ವಭೌಮತ್ವವನ್ನು ಕಳೆದುಕೊಂಡಿದ್ದ ನಿಜಾಮ ಜನಹಿತ ಕಾರ್ಯಕ್ರಮಗಳನ್ನು ಕೈಗೊಳ್ಳುವ ಉದ್ದೇಶವನ್ನು ಹೊಂದಿರಲಿಲ್ಲ. ಸ್ವತಂತ್ರ ಇಸ್ಲಾಮಿಕ್ ರಾಜ್ಯದ ಕನಸನ್ನು ಕಾಣುತ್ತಿದ್ದ ಕಡೆಯ ನಿಜಾಮ್ ಉಸ್ಮಾನ ಅಲಿಖಾನ ತನ್ನ ರಾಜ್ಯದಲ್ಲಿ ಅಜಿರಷ್ಟು ಹಿಂದೂಗಳ ಹಿತಾಸಕ್ತಿಯನ್ನು ಪೂರ್ಣವಾಗಿ ಕಡೆಗಣಿಸಿದ್ದನು. ಮುಸಲ್ಮಾನರ ಹಿತರಕ್ಷಣೆಗೆಂದು ಹೈದರಾಬಾದಿನಲ್ಲಿ ಸ್ಥಾಪನೆಗೊಂಡಿದ್ದ "ಇತ್ತೇಹಾದ್ ಉಲ್ ಇಸ್ಲಾಂ" ಮುಸ್ಲಿಂನ ಸಂಸ್ಥೆಯು ಕಾಲಕ್ರಮದಲ್ಲಿ ಈ ಸಂಸ್ಥಾನದ ರಾಜಕೀಯದ ಮೇಲೆ ಪ್ರಭಾವ ಬೀರುವಷ್ಟು ಪ್ರಬಲವಾಗಿ ಬೆಳೆದಿದ್ದಿತು. ೧೯೪೬ರಲ್ಲಿ ಖಾಸಿಂ ರಜ್ವಿ ಎಂಬ ಉಗ್ರವಾದಿ ಮುಸ್ಲಿಂ ಇತ್ತೆಹಾದನ ನಾಯಕನಾದಾಗ ರಾಜ್ಯದಲ್ಲಿ ಉಲ್ಬಣಾವಸ್ಥೆ ತಲೆದೋರಿತು. ಇತ್ತೆಹಾದ್‌ನ್ ಸಂಸ್ಥೆಯನ್ನು ಒಂದು ಫ್ಯಾಸಿಸ್ಟ್ ಸಂಘಟನೆಯನ್ನಾಗಿ ಮಾಡಿಕೊಂಡು ರಾಜ್ಯಾಡಳಿತದಲ್ಲಿ ಪ್ರವೇಶ ಮಾಡಲಾರಂಭಿಸಿದನು. ಖಾಸಂ ರಜ್ವಿ ಬಹುಬೇಗ ರಾಜಕೀಯ ನಾಯಕನಾಗಿ ಬೆಳೆದು ಹೈದರಾಬಾದಿನ ಆಡಳಿತಗಾರನೆನಿಸಿಕೊಳ್ಳುವ ಮಟ್ಟಕ್ಕೆ ಬೆಳೆದನು. ನಿಜಾಮ ಉಸ್ಮನ್ ಅಲಿಖಾನ್ ರಜ್ವಿ ಕೈಗೊಂಬೆಯಾಗಿ ಆಡಳಿತ ಸೂತ್ರಗಳನ್ನು ರಜ್ವಿಗೆ ಒಪ್ಪಿಸಿದನು.

ಖಾಸಿಂ ರಜ್ವಿ ರಜಾಕಾರರೆಂಬ ಸ್ವಯಂ ಸೇವಕರ ಗುಂಪನ್ನು ಕಟ್ಟಿಕೊಂಡು ಅವರ ಸಹಾಯದಿಂದ ಒಂದು ಸಮಾನಾಂತರವಾದ ಸರ್ಕಾರವನ್ನು ಸ್ಥಾಪಿಸಿದನು. ಸಂಸ್ಥಾನದ ಸಾರ್ವಭೌಮತ್ವ ರಜ್ವಿ ಅಧೀನದಲ್ಲಿದ್ದ ಇತ್ತೇಹಾದ್ ಕೈಯಲ್ಲಿದೆ, ನಿಜಾಮನ ಕೈಯಲಿಲ್ಲ ಎಂದು ಸಾರಿದ ರಜ್ವಿ ಈ ಇತ್ತೇಹಾದ್ ಸಂಸ್ಥೆಯ ಮೂಲಕ ದಖನ್ನಿನ ಸಾರ್ವಭೌಮ ಶಕ್ತಿಯನ್ನು ಸ್ಥಾಪಿಸುವ ಪ್ರಯತ್ನ ಮಾಡಿದನು. ಆಡಳಿತದಲ್ಲಿ ಬಹುದಿನಗಳಿಂದ ಜನರು ಅಪೇಕ್ಷಿಸುತ್ತಿದ್ದ ಸುಧಾರಣೆಗಳನ್ನು ತರುವುದನ್ನು ಬಿಟ್ಟು ಮುಸ್ಲಿಮರು ರಾಜ್ಯದ ಪ್ರಮುಖ ಶಕ್ತಿಯೆಂದು ಸಾರಿದನು. ರಜ್ವಿ ನಾಯಕತ್ವದಲ್ಲಿ ರಜಾಕರರು ಬಹುಬೇಗ ಉಗ್ರಗಾಮಿ ಗುಂಪಾಗಿ ಹಿಂಸಾಚಾರಗಳನ್ನು ಕೈಗೊಂಡಾಗ ನಿಜಾಮನು ಮೂಕ ಪ್ರೇಕ್ಷಕನಾಗಿ ನಿಸ್ಸಹಾಯಕನಾಗಿ ನಿಂತನು. ಈ ಸಂದರ್ಭದಲ್ಲಿ ಹೈದರಾಬಾದ್ ಸಂಸ್ಥಾನದಲ್ಲಿ ಕಾಂಗ್ರೆಸ್ ಸಂಸ್ಥೆ ಸ್ವತಂತ್ರ ಚಳವಳಿಯಲ್ಲಿ ಭಾಗವಹಿಸುತ್ತಿದ್ದರೂ ನಿಜಾಮ ಸರ್ಕಾರ ಕಾಂಗ್ರೆಸ್ ಚಟುವಟಿಕೆಗಳನ್ನು ಉಗ್ರವಾಗಿ ಅಡಗಿಸಿತು. ಪ್ರಮುಖ ರಾಜಕೀಯ ವಿದ್ಯಾಮಾನಗಳ ಬಗ್ಗೆ ಮಹಮ್ಮದ್ ಅಲಿ ಜಿನ್ನ ಅವರ ಸಲಹೆಯನ್ನು ಪಡೆದುಕೊಳ್ಳುತ್ತಿತ್ತು.[೨೨] ಇಂತಹ ಕ್ಲಿಷ್ಟ ಪರಿಸ್ಥಿತಿಯಲ್ಲಿ ಮಿರ್ಜಾ ಎಂ ಇಸ್ಮಾಯಿಲ್ ಹೈದರಾಬಾದಿನ ದಿವಾನರಾಗಬೇಕೆಂದು ನಿಜಾಮ ಪತ್ರ ಬರೆದಿದ್ದರಿಂದ ದಿವಾನರಾಗಲು ಮಿರ್ಜಾರವರು ಒಪ್ಪಿಕೊಂಡಿದ್ದರು. ಈ ವಿಷಯ ತಿಳಿದು ಜಿನ್ನಾ ನಿಜಾಮರಿಗೆ

ಪತ್ರ ಬರೆದು ದಯಾಮಾಡಿ ನೀವು ಮಿರ್ಜಾರಿಗೆ ದಿವಾನ ಪದವಿ ಕೊಡಬೇಡಿ ಎಂದು ಪತ್ರ ಮುಖಾಂತರ ಕೇಳಿಕೊಂಡರು. ಆದರೆ ಈ ಪತ್ರಕ್ಕೆ ನಿಜಾಮ ಉತ್ತರ ನೀಡದಿದ್ದಕ್ಕೆ ಜಿನ್ನ ನೇರವಾಗಿ ಬೇಟಿ ಮಾಡುವುದಕ್ಕಾಗಿ ಹೈದರಾಬಾದಿಗೆ ಬಂದು ನಿಜಾಮನ ಬೇಟಿಗಾಗಿ ಸಮಯ ನಿಗಧಿ ಮಾಡಿಕೊಂಡಿದ್ದರು. ನಿಜಾಮರಿಗೆ ಭೇಟಿ ಮಾಡಿ ಮಿರ್ಜಾ ಬಗ್ಗೆ ಇಲ್ಲಸಲ್ಲದ ರೀತಿಯಲ್ಲಿ ಹೇಳಿದರು. ಹಾಗೆ ಮಿರ್ಜಾ ಮುಸ್ಲಿಂ ವಿರೋಧಿಯಾಗಿದ್ದಾರೆ ಅದಕ್ಕಾಗಿ ನೀವು ಯಾವುದೇ ಕಾರಣಕ್ಕೂ ದಿವಾನ ಪದವಿ ನೀಡಬಾರದು ಎಂದರು. ಜಿನ್ನಾರವರ ಮಾತನ್ನು ಶಾಂತಚಿತ್ತರಾಗಿ ಆಲಿಸಿದ ನಿಜಾಮರು ಕೊನೆಗೆ ಕೋಪದಿಂದ ಕೆರಳಿ ಒಳ್ಳೆ ಯಾವ ಕಾಲದಲ್ಲೂ ನೀವು ನನಗೆ ಸಹಾಯವೆಸಗಿಲ್ಲ, ನಿಮ್ಮ ಸಹಕಾರದ ಅಗತ್ಯವೂ ನನಗಿಲ್ಲ. ನೀವು ಈ ವಿಷಯದಲ್ಲಿ ಸುಮ್ಮನಿದ್ದರೆ ಸಾಕು ಎಂದು ಖಾರವಾಗಿ ನುಡಿದರು. ಈ ಮಾತುಗಳಿಂದ ಜಿನ್ನಾರವರು ವಿಚಲಿತರಾಗಿ ಮತ್ತೆ ಮಾತು ಮುಂದುವರಿಸಲು ಪ್ರಯತ್ನಿಸಿದರು. ಆದರೆ ನಿಜಾಮರು ಅಸ್ಥಾನದಿಂದ ಎದ್ದು ಹೋಗುವಾಗ ಬೇರೆ ಯಾವುದೇ ಕೆಲಸವಿದ್ದರೆ ಸಂಬಂಧಪಟ್ಟ ಸಚಿವರಿಗೆ ಭೇಟಿಯಾಗಿ ಕೆಲಸ ಮಾಡಿಕೊಳ್ಳಿ, ನನಗೆ ಬೇರೆ ಕೆಲಸವಿದೆ ಎಂದು ಹೇಳಿ ಹೋದರು.[೨೩]

೧೯೪೭ ಆಗಸ್ಟ್‌ರಲ್ಲಿ ನಿಜಾಮನ ಆಸೆಯಂತೆ ಮಿರ್ಜಾ ಎಂ ಇಸ್ಮಾಯಿಲ್‌ರು ದಿವಾನರಾಗಿ ಅಧಿಕಾರ ಸ್ವೀಕರಿಸಿದರು. ಅಧಿಕಾರ ಸ್ವೀಕರಿಸಿದ ಕೂಡಲೇ ರಾಜ್ಯದ ಕೆಲವು ಪ್ರಮುಖ ಸಮಸ್ಯೆಗಳನ್ನು ಬಗೆಹರಿಸುವ ಜವಾಬ್ದಾರಿಯನ್ನು ಮಿರ್ಜಾ ಅವರು ಹೊರಬೇಕಾಯಿತು. ಮೊದಲನೆಯದು ಬಿರಾರ ಪ್ರಾಂತ್ಯದ ಹಸ್ತಾಂತರಕ್ಕೆ ಸಂಬಂಧಿಸಿದ್ದು, ಅದೇ ರೀತಿ ಗೋವಾದ ಬಂದರನ್ನು ಪಡೆದುಕೊಳ್ಳುವುದು ಹಾಗೂ ನಗರದಲ್ಲಿ ಶಿಸ್ತು ಸ್ವಚ್ಛತೆಯನ್ನು ತರಲು ಪ್ರಯತ್ನಿಸಿ ನಗರದ ಸೌಂದರ್ಯವನ್ನು ಹೆಚ್ಚಿಸಲು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದರು. ಅಷ್ಟು ಮಾತ್ರವಲ್ಲದೆ ಅನೇಕ ಜನಪರ ಕಾರ್ಯಗಳಿಗೆ ಹಾಗೂ ಸುಧಾರಣೆಗಳಿಗೆ ಚಾಲನೆ ನೀಡಿದರು. ದಿವಾನ್ ಮಿರ್ಜಾ ಅವರ ಕಾರ್ಯವೈಖರಿ ಸರ್ಕಾರವನ್ನು ನಿಯಂತ್ರಿಸುತ್ತಿತ್ತು. ಇತ್ತೆಹಾದ್ ಗೆ ಇದು ಸರಿ ಹೋಗಲಿಲ್ಲ. ಅವರು ಸಾರ್ವಜನಿಕರನ್ನು ಸಂಪರ್ಕಿಸುವುದು, ಕಾಂಗ್ರೆಸ್ಸಿಗರನ್ನು ಗೌರವದಿಂದ ನೋಡುವುದು ದೇಶದ್ರೋಹದಂತೆ ಕಾಣಿಸಿತು. ಹೈದರಾಬಾದ್‌ನಲ್ಲಿ ಅದರಲ್ಲೂ ಗಡಿ ಪ್ರದೇಶದಲ್ಲಿ ರಜಾಕರರ ದೌರ್ಜನ್ಯ ಅವ್ಯಾಹತವಾಗಿ ನಡೆಯುತ್ತಿತ್ತು. ಮಿರ್ಜಾ ನಿಷ್ಪಕ್ಷಪಾತವಾಗಿ ಕಾನೂನಿನನ್ವಯ ಆಳ್ವಿಕೆ ನಡೆಸಿದರೆ ರಜಾಕಾರರ ಚಟುವಟಿಕೆಗಳು ನಿಲ್ಲಬೇಕಾಗುತ್ತಿತ್ತು. ಹೈದರಾಬಾದ್ ಮಜ್ಲಿಸ್ ಸದಸ್ಯರಿಗೂ ಮಿರ್ಜಾರವರು ಹಿಂದೂಗಳು ಸಹ ಮಜ್ಲಿಸ್‌ದಲ್ಲಿ ಪಾತ್ರವಹಿಸಬೇಕು ಹಾಗೆ ಹಿಂದೂಗಳಿಗೂ ಸಹ ಮಂತ್ರಿ ಪದವಿ ದೊರಕಬೇಕೆಂದು ಸಲಹೆ ಮಾಡಿದರು. ಆದರೆ ಮಜ್ಲಿಸ್ ಅದನ್ನು ವಿರೋಧಿಸಿತು. ಮಿರ್ಜಾ ಅವರ ಧರ್ಮನಿರಪೇಕ್ಷಿತ ನೀತಿಗೆ ನಿಜಾಮನ ರಾಜ್ಯದಲ್ಲಿ ಸ್ಥಾನವಿರಲಿಲ್ಲ. ಇಂತಹ ಅನೇಕ ಘಟನೆಯಿಂದ ಮಿರ್ಜಾರವರು ರಜಾಕಾರರ ಜೊತೆ ಘರ್ಷಣೆಗೆ ಇಳಿಯದೆ ತಮ್ಮ ಹುದ್ದೆಗೆ ರಾಜಿನಾಮೆ ನೀಡಿದರು.[೨೪]

## ಅಡಿ ಟಿಪ್ಪಣಿಗಳು

೧. ಚಂದ್ರಶೇಖರ್ ಎಸ್., ಆಧುನಿಕ ಕರ್ನಾಟಕದ ಆಂದೋಲನಗಳು, ೨೦೦೨, ಪು.೪೭-೪೮

೨. ಸುಬ್ಬರಾವ್ ಎನ್.ಎಸ್., ಮೈಸೂರು ಕೈಪಿಡಿ, ೧೯೩೭, ಪು.೨೦೯

೩. ಚಂದ್ರಶೇಖರ ಎಸ್., ಪೂರ್ವೋಕ್ತ, ಪು.೪೭-೪೮

೪. ಮಜುಂದಾರ್ ಪಿ.ಆರ್., ದಕ್ಷಿಣ ಭಾರತದ ಇತಿಹಾಸ, ೧೯೯೭, ಪು-೨೫೧

೫. ಬಸವರಾಜ ಎನ್.ಅಕ್ಕಿ, ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿ, ೨೦೦೪, ಪು.೪೯

೬. ಚಂದ್ರಶೇಖರ ಎಸ್., ಪೂರ್ವೋಕ್ತ, ಪು.೪೯

೭. ದಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ, ಸ್ಟಡೀಸ್ ಆನ್ ದಿವಾನ್ ಸರ್ ಮಿರ್ಜಾ, ೧೯೯೭, ಪು.೪೬, ೪೭, ೪೮

೮. ಶಿವರುದ್ರಸ್ವಾಮಿ ಎಸ್.ಎನ್., ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ ೨೦೦೦, ಪು.೪೫೨

೯. ರಂಗಸ್ವಾಮಯ್ಯ ಜಿ.ಆರ್., ಕರ್ನಾಟಕದ ಸಂಕ್ಷಿಪ್ತ ಚರಿತ್ರೆ, ೨೦೦೧, ಪು.೩೨೦

೧೦. ಗೋವಿಂದರಾಜು ಸಿ.ಆರ್., ಇತಿಹಾಸ II, ೨೦೦೫, ಪು.೨೭೪

೧೧. ಮಜುಂದಾರ್ ಪಿ.ಆರ್., ಪೂರ್ವೋಕ್ತ, ಪು.೨೫೨

೧೨. ಸುಬ್ಬರಾವ್ ಎನ್.ಎಸ್., ಪೂರ್ವೋಕ್ತ, ಪು.೨೧೩

೧೩. ರಂಗಸ್ವಾಮಯ್ಯ ಜಿ.ಆರ್., ಪೂರ್ವೋಕ್ತ, ಪು.೩೨೦

೧೪. ಚಂದ್ರಶೇಖರ್ ಎಸ್., ಪೂರ್ವೋಕ್ತ, ಪು.೫೧, ೫೨

೧೫. ಶಿವರುದ್ರಸ್ವಾಮಿ ಎಸ್.ಎನ್, ಪೂರ್ವೋಕ್ತ, ಪು.೪೫೩, ೪೫೪

೧೬. ಚಂದ್ರಶೇಖರ್ ಎಸ್., ಪೂರ್ವೋಕ್ತ, ಪು.೫೩, ೫೪

೧೭. ನಾರಾಯಣರಾವ್ ಬಿ.ಎಸ್., ಮಿರ್ಜಾ ಎಂ ಇಸ್ಮಾಯಿಲ್ ಅವರ ಜೀವನ ಚರಿತಾ, ೨೦೦೯, ಪು.೯೩, ೯೪

೧೮. ಸೂರ್ಯನಾಥ ಕಾಮತ್, ಕರ್ನಾಟಕದ ಸಂಕ್ಷಿಪ್ತ ಇತಿಹಾಸ, ಪು.೨೪೬

೧೯. ನಾರಾಯಣರಾವ್ ವಿ.ಎಸ್., ಪೂರ್ವೋಕ್ತ, ಪು.೯೮, ೯೯, ೧೦೦

೨೦. ದಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ, ಸಂಪುಟ ೮೬, ಸಂಚಿಕೆ ೧, ಪು.೧೦೯

೨೧. ನಾರಾಯಣರಾವ್ ವಿ.ಎಸ್., ಪೂರ್ವೋಕ್ತ, ಪು.೧೧೧

೨೨. ಚಿನ್ನಸ್ವಾಮಿ ಸೊಸಲೆ ಎನ್.(ಸಂ), ದಿವಾನ್ ಸರ್ ಮಿರ್ಜಾ ಎಂ ಇಸ್ಮಾಯಿಲ್ ಕಾಲದ ಮೈಸೂರು ಸಂಸ್ಥಾನ, ೨೦೧೨, ಪು.೪೯೦, ೪೯೧, ೪೯೩

೨೩. ನಾರಾಯಣರಾವ್ ವಿ.ಎಸ್., ಪೂರ್ವೋಕ್ತ, ಪು.೧೧೫, ೧೧೬

೨೪. ಚಿನ್ನಸ್ವಾಮಿ ಸೊಸಲೆ ಎನ್., ಪೂರ್ವೋಕ್ತ, ಪು.೪೯೪

## ಅಧ್ಯಾಯ ಐದು

# ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಮಿರ್ಜಾರ ಸಾಧನೆಗಳು

೫.೧. ಸಾರ್ವಜನಿಕ ಭೇಟಿ

೫.೨. ನಗರ ಸಂಚಾರ ಮುಖಾಂತರ ಸಮಸ್ಯೆಗೆ ಪರಿಹಾರ

೫.೩. ಗೋವಾ ಪ್ರದೇಶವನ್ನು ಸೇರಿಸಿಕೊಳ್ಳುವ ಪ್ರಯತ್ನ

೫.೪. ಬಿರಾರ್ ಹೈದರಾಬಾದ್‌ಗೆ ಸೇರ್ಪಡೆ

೫.೫. ಆಡಳಿತ ಸುಧಾರಣೆ

೫.೬. ಕೇಂದ್ರದೊಂದಿಗೆ ಸ್ಟ್ಯಾಂಡ್‌ಸ್ಟಿಲ್ ಒಪ್ಪಂದ

೫.೭. ರಾಜಕೀಯ ಸುಧಾರಣೆ

೫.೮. ಲೆಜಿಸ್ಲೇಟಿವ್ ಕೌನ್ಸಿಲ್‌ನ ಸುಧಾರಣೆ

೫.೯. ಮಾರುಕಟ್ಟೆ ಇಲಾಖೆ ಸುಧಾರಣೆ

೫.೧೦. ಹುಸೇನ್ ಸಾಗರ ಸರೋವರದ ಅಭಿವೃದ್ಧಿ

# ಅಧ್ಯಾಯ ಐದು

## ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಮಿರ್ಜಾರ ಸಾಧನೆಗಳು

ಮಿರ್ಜಾ ಎಂ ಇಸ್ಮಾಯಿಲ್ ಮೈಸೂರಿನಲ್ಲಿ ಆಳಿದ ದಿವಾನರಲ್ಲಿ ಪ್ರಮುಖರು. ಹದಿನೈದು ವರ್ಷ ಇವರು ದಕ್ಷತೆಯಿಂದ ಕಾರ್ಯ ನಿರ್ವಹಿಸಿ ನಿವೃತ್ತರಾದರು. ದಕ್ಷರು, ನಿಷ್ಠರು ಆಗಿದ್ದ ಮಿರ್ಜಾ ಮೈಸೂರಿನ ಇತಿಹಾಸದಲ್ಲಿ ಬಹು ಕಠಿಣವಾದ ಪರಿಸ್ಥಿತಿಯಲ್ಲಿ ದಿವಾನರಾಗಿ ನೇಮಕಗೊಂಡು ರಾಜ್ಯಕ್ಕೆ ಉಪಯುಕ್ತವಾದ ಸೇವೆಯನ್ನು ಸಲ್ಲಿಸಿದರು. ಭಾರತದಲ್ಲಿ ದಕ್ಷ ಆಡಳಿತಗಾರರಾಗಿ ನಿಷ್ಠೆ ಪ್ರಾಮಾಣಿಕತೆಗೆ ಹೆಸರುವಾಸಿಯಾಗಿದ್ದ ಮಿರ್ಜಾ ಅವರು ನಿವೃತ್ತರಾದ ಮೇಲೆ ಅನೇಕ ದೇಶೀಯ ಸಂಸ್ಥಾನಗಳು ಅವರನ್ನು ದಿವಾನರನ್ನಾಗಿ ನೇಮಿಸಿಕೊಳ್ಳಲು ಮುಂದೆ ಬಂದವು. ಅದರಂತೆ ಮಿರ್ಜಾ ಅವರು ರಾಜಸ್ಥಾನದ ಜಯಪುರದಲ್ಲಿ ಸ್ವಲ್ಪಕಾಲ ದಿವಾನರಾಗಿದ್ದು, ಉಪಯುಕ್ತವಾದ ಸೇವೆಯನ್ನು ಸಲ್ಲಿಸಿದರು. ಇದಾದ ನಂತರ ಅವರು ಹೈದರಾಬಾದ್‌ನ ನಿಜಾಮರ ಆಹ್ವಾನದ ಮೇರೆಗೆ ಅಲ್ಲಿ ದಿವಾನರಾಗಿ ನೇಮಕಗೊಂಡರು.

ಮಿರ್ಜಾ ಅವರು ನಿಜಾಮರ ಕೋರಿಕೆಯಂತೆ ಹೈದರಾಬಾದಿನ ದಿವಾನರಾಗಿ ಆಗಸ್ಟ್ ೧೯೪೬ರಲ್ಲಿ ಅಧಿಕಾರ ಸ್ವೀಕರಿಸಿದರು. ಆಗ ಹೈದರಾಬಾದ್ ವಿಸ್ತೀರ್ಣ ಜನಬಾಹುಳ್ಯವುಳ್ಳ ಮತ್ತು ಆದಾಯದಲ್ಲಿ ಇತರ ದೇಶೀಯ ಸಂಸ್ಥಾನಗಳಿಗಿಂತ ದೊಡ್ಡದಾಗಿತ್ತು. ಈ ಸಂಸ್ಥಾನವನ್ನು ಮೈಸೂರು ಮತ್ತು ಜಯಪುರಗಳಲ್ಲಿ ಮಾಡಿದ ಅಭಿವೃದ್ಧಿಯ ಕಾರ್ಯಗಳ ಮುಖಾಂತರ ಪ್ರಗತಿಪರ ಕೆಲಸಕಾರ್ಯಗಳನ್ನು ಜಾರಿಗೆ ತರಲು ಉತ್ಸಾಹದಿಂದ ಹೊಸ ಹೊಸ ಯೋಜನೆಯನ್ನು ಜಾರಿಗೆ ತರಲು ಪ್ರಾರಂಭಿಸಿದರು. ಅವುಗಳಲ್ಲಿ ಸಾರ್ವಜನಿಕರಿಗೆ ಭೇಟಿ ನೀಡುವುದು, ಹೈದರಾಬಾದ್ ಸಂಸ್ಥಾನಕ್ಕೆ ಬೀರಾರ್ ಪ್ರಾಂತ್ಯವನ್ನು ಸೇರಿಸಿಕೊಳ್ಳಲು ಮಾಡಿದ ಪ್ರಯತ್ನ, ಹುಸೇನ್ ಸಾಗರ ಅಭಿವೃದ್ಧಿ, ರಸ್ತೆಗಳ ಅಭಿವೃದ್ಧಿ, ಗೋವಾ ಪ್ರದೇಶದ ಬಂದರನ್ನು ವಶಪಡಿಸಿಕೊಳ್ಳಲು ಮಾಡಿದ ಪ್ರಯತ್ನ ಮುಂತಾದ ಯೋಜನೆಗಳನ್ನು ಹಾಕಿಕೊಂಡು ಹೈದರಾಬಾದ್ ಸಂಸ್ಥಾನವನ್ನು ಒಂದು ಮಾದರಿ ಸಂಸ್ಥಾನವನ್ನಾಗಿ ಮಾಡಲು ಪ್ರಯತ್ನ ಪಟ್ಟಿದರು. ದಿವಾನರಾಗಿ ಮಾಡಿದ ಸಾಧನೆಗಳು ಈ ಕೆಳಗಿನಂತಿವೆ.

## ೫.೧. ಸಾರ್ವಜನಿಕ ಭೇಟಿ

ಮಿರ್ಜಾ ಎಂ ಇಸ್ಮಾಯಿಲ್‌ರು ಮೈಸೂರು ಹಾಗೂ ಜಯಪುರದಲ್ಲಿ ನಡೆಸಿಕೊಂಡು ಬಂದಂತೆ ಹೈದರಾಬಾದಿನಲ್ಲಿ ವಾರದಲ್ಲಿ ಎರಡು ಹಗಲು ಸಾರ್ವಜನಿಕರ ಭೇಟಿಗಾಗಿ ಮೀಸಲು ಇಟ್ಟಿದ್ದರು. ದಿನಕ್ಕೆ ಇನ್ನೂರು ಮುನ್ನೂರು ಜನಸಾಮಾನ್ಯರು ದಿವಾನರನ್ನು ಕಂಡು ತಮ್ಮ ಕಷ್ಟ ಸಂಕಟಗಳನ್ನು ತೋಡಿಕೊಂಡು ಅರ್ಜಿ ಅಹವಾಲು ಕೊಡುವ ವ್ಯವಸ್ಥೆ ಮಾಡಲಾಗಿತ್ತು. ಇದಕ್ಕಿಂತ ಮೊದಲು ಹೈದರಾಬಾದ್ ಸಂಸ್ಥಾನದ ದಿವಾನರನ್ನು ನೋಡಿ ನೇರವಾಗಿ ಮಾತಾಡುವ ಸೌಭಾಗ್ಯ ಪ್ರಜೆಗಳಿಗೆ ಇರಲಿಲ್ಲ. ಭಯದ ವಾತಾವರಣದಲ್ಲಿ ಆಳ್ವಿಕೆ ನಡೆಯುತ್ತಿತ್ತು. ಇದರಿಂದ ಸಾರ್ವಜನಿಕರು ಆಳ್ವಿಕೆಯ ಬಗ್ಗೆ ಯಾವುದೇ ವಿಷಯದಲ್ಲಿ ಬೆರೆಯುತ್ತಿರಲಿಲ್ಲ. ಆದರೆ ಮಿರ್ಜಾ ಅವರು ಇದನ್ನು ತೊಡೆದು ಹಾಕಿ ಸಾರ್ವಜನಿಕರನ್ನು ಭೇಟಿಯಾಗಿ ಅವರ ಸಮಸ್ಯೆಯನ್ನು ಆಲಿಸುತ್ತಿದ್ದರು. ರಾಜ್ಯದ ಅತ್ಯುನ್ನತ ಅಧಿಕಾರಿ ಪ್ರಧಾನಿಯನ್ನು ದಿವಾನ ಭೇಟಿಯಾಗಲು ಅವಕಾಶ ದೊರೆಯಿತಲ್ಲ ಎಂಬುದು ಜನರಿಗೆ ದೊಡ್ಡ ಸಮಾಧಾನವಾಗಿತ್ತು. ಮಿರ್ಜಾ ಅವರು ಸಾರ್ವಜನಿಕರಿಗೆ ಆಡಳಿತದಲ್ಲಿ ವಿಶ್ವಾಸ ಮೂಡುವಂತೆ ಹಾಗೂ ಜನರಲ್ಲಿ ಆಡಳಿತದ ಬಗ್ಗೆ ತಿಳುವಳಿಕೆ ಬರುವಂತೆ ಮಾಡಿದರು. ಸಾರ್ವಜನಿಕರಿಗೆ ಭೇಟಿ ನೀಡುವ ಕಾರ್ಯಕ್ರಮ ಹಾಕಿಕೊಂಡು ಅವರ ಸಮಸ್ಯೆಯನ್ನು ಹತ್ತಿರದಿಂದಲ್ಲೇ ಆಲಿಸಿ, ಅದಕ್ಕೆ ಪರಿಹಾರ ಸೂಚಿಸುವ ಮೂಲಕ ಕಷ್ಟ ತೋಡಿಕೊಂಡು ಬಂದ ಜನರಿಗೆ ಆಶಾದಾಯಕರಾದರು. ಜನರಿಗೆ ಮಿರ್ಜಾ ಅವರ ಮೇಲೆ ಪ್ರೀತಿ ವಿಶ್ವಾಸ ಹೆಚ್ಚಾಯಿತು.[೧] ಸಂಸ್ಥಾನದಲ್ಲಿ ಅತಿ ವೇಗವಾಗಿ ಜನಮನ್ನಣೆ ಗಳಿಸಿದರು. ಇದು ರಜಾಕಾರರ ಅಸೂಯೆಗೂ ಕಾರಣವಾಯಿತು. ವಾರಕ್ಕೆ ಎರಡು ದಿನ ದಿವಾನ್ ಕಚೇರಿಯಲ್ಲಿ ದರ್ಬಾರ ನಡೆಸುತ್ತಿದ್ದಾರೆ ಎಂದು ಇಲ್ಲ ಸಲ್ಲದ ವಿಷಯಗಳನ್ನು ನಿಜಾಮರಿಗೆ ಹೇಳಿ ನಂಬಿಸಿದರು. ಇದರಿಂದ ಕೋಪಗೊಂಡು ನಿಜಾಮರು ಮಿರ್ಜಾ ಅವರನ್ನು ಕರೆಸಿ ವಿಚಾರಿಸಿದರು. ಅದಕ್ಕೆ ಅವರು ನಾನು ಸಂಸ್ಥಾನದ ಪ್ರತಿಷ್ಠೆಯನ್ನು ಬೆಳೆಸುತ್ತಿದ್ದೇನೆ ವಿನಾ ನನ್ನ ಪ್ರತಿಷ್ಠೆ ಅಲ್ಲ. ಜನರ ಸಮಸ್ಯೆಗೆ ಪರಿಹಾರವನ್ನು ಕಂಡುಕೊಂಡು ಜನರ ಜೀವನದಲ್ಲಿ ಮಹತ್ತರವಾದ ಬದಲಾವಣೆ ಮಾಡುವುದರಿಂದ ರಾಜ್ಯದ ಜನರು ಸುಖದ ಜೀವನ ನಡೆಸುತ್ತಾರೆ. ಇದರಿಂದ ಸಂಸ್ಥಾನಕ್ಕೆ ಹೆಚ್ಚಿನ ಆದಾಯ ಬರುತ್ತದೆ. ಆಸಫ್‌ಜಾಹ ಮನೆತನದ ಕೀರ್ತಿ ಹೆಚ್ಚುತ್ತದೆ. ಸಂಸ್ಥಾನವು ಒಂದು ಅಭಿವೃದ್ಧಿ ರಾಜ್ಯವಾಗುತ್ತದೆ ಎಂದು ಮಿರ್ಜಾ ಸಮಾಧಾನ ನೀಡಬೇಕಾಯಿತು.[೨]

## ೫.೨. ನಗರ ಸಂಚಾರ ಮುಖಾಂತರ ಸಮಸ್ಯೆಗೆ ಪರಿಹಾರ

ಮೈಸೂರು ಮತ್ತು ಜಯಪುರದಲ್ಲಿ ಆಚರಿಸುತ್ತಿದ್ದಂತೆ ವಾರಕ್ಕೆ ಒಂದು ಬಾರಿ ನಗರ ಸಂಚಾರವನ್ನು ಮಿರ್ಜಾ ಇಲ್ಲಿಯೂ ಇಟ್ಟುಕೊಂಡರು. ತಮ್ಮ ಜೊತೆಗೆ ನಾಲ್ಕೈದು ಅಧಿಕಾರಿಗಳನ್ನು ದೊಡ್ಡ ಮೋಟಾರಿನಲ್ಲಿ ಕೂರಿಸಿಕೊಂಡು ನಗರ ಸಂಚಾರವನ್ನು ನಡೆಸುತ್ತಿದ್ದರು. ಇವರಿಗಿಂತ ಮುಂಚಿನ ದಿವಾನರು ಇಂತಹ ಸಾರ್ವಜನಿಕ ಕಾರ್ಯ ಮಾಡಿರಲಿಲ್ಲ. ಆದರೆ ಮಿರ್ಜಾ ಅವರು ಸ್ವ ಇಚ್ಛೆಯಿಂದ ನಗರ ತುಂಬೆಲ್ಲಾ

ಓಡಾಡಿ ಜನರ ಸಮಸ್ಯೆಯನ್ನು ನೇರವಾಗಿ ತಾನು ಕಣ್ಣಾರೆ ಕಂಡು, ಆ ಸಮಸ್ಯೆಗಳಿಗೆ ಕಾರಣವೇನು ಹಾಗೂ ಅವನ್ನು ಪರಿಹಾರ ಮಾಡಬೇಕಾದರೆ ಏನು ಮಾಡಬೇಕು ಎಂದು ಯೋಚನೆ ಮಾಡಿ ಅದಕ್ಕೆ ಪರಿಹಾರ ಕಂಡು ಹಿಡಿಯುತ್ತಿದ್ದರು. ತಾವು ಕೈಗೊಂಡ ಈ ಸಂಚಾರ ಕಾರ್ಯಗತವಾಗಿದೆಯೇ ಎಂದು ತಿಳಿದುಕೊಳ್ಳಲು ತಾವೇ ನೇರವಾಗಿ ಬಂದು ನೋಡಿ ಹೋಗುತ್ತಿದ್ದರು. ಇದರಿಂದಾಗಿ ಯಾವುದೇ ಕೆಲಸ ಕಾರ್ಯಗಳು ವಿಳಂಬವಿಲ್ಲದೆ ಸಾಗುತ್ತಿದ್ದವು. ಹೈದರಾಬಾದ್ ಸಂಸ್ಥಾನವನ್ನು ಅಭಿವೃದ್ಧಿಯತ್ತ ಕೊಂಡ್ಯೊಯುವ ತಮ್ಮ ಪ್ರಯತ್ನ ಸಾಗಿಸುತ್ತಾ ಅತಿ ವೇಗವಾಗಿ ಜನರ ಅಚ್ಚುಮೆಚ್ಚುಗೆಗೆ ಪಾತ್ರರಾದರು. ಇದನ್ನು ಕಂಡು ರಜಾಕಾರರು ಮಿರ್ಜಾ ಅವರಿಗೆ ಆಡಳಿತದಲ್ಲಿ ಸಹಾಯ ನೀಡಲಿಲ್ಲ. ನಿಜಾಮರಿಗೆ ಇವರ ವಿರುದ್ಧ ಇಲ್ಲಸಲ್ಲದ ಮಾತು ಹೇಳಿ ಅವರ ಮೇಲೆ ನಿಯಂತ್ರಣ ಹೇರುವ ಕೆಲಸಕ್ಕೆ ಕೈ ಹಾಕಿದರು. ನಿಜಾಮರು ರಜಾಕಾರರ ಮಾತು ನಂಬಿ ಮಿರ್ಜಾ ಅವರಿಗೆ ಆಡಳಿತದಲ್ಲಿ ಸಹಾಯ ಮಾಡದೆ ಅವರನ್ನು ನಿಯಂತ್ರಣ ಮಾಡಲು ಪ್ರಯತ್ನಿಸುತ್ತಿದ್ದರು. ಆದರೂ ಕೂಡ ತಮ್ಮ ಕಾರ್ಯವನ್ನು ಯಶಸ್ವಿಯಾಗಿಸಲು ಹಗಲಿರಳು ಎನ್ನದೆ ಕೆಲಸ ಮಾಡಿ ಹೈದರಾಬಾದ್ ಸಂಸ್ಥಾನವನ್ನು ಒಂದು ಮಾದರಿ ಸಂಸ್ಥಾನವನ್ನಾಗಿ ಮಾಡಲು ಪ್ರಯತ್ನಿಸಿದರು.[೩]

### ೫.೩. ಗೋವಾ ಪ್ರದೇಶವನ್ನು ಸೇರಿಸಿಕೊಳ್ಳುವ ಪ್ರಯತ್ನ

ಮಿರ್ಜಾ ಅವರು ತಾವು ದಿವಾನರಾಗಿ ಅಧಿಕಾರವನ್ನು ವಹಿಸಿಕೊಂಡ ಮೇಲೆ ಹೈದರಾಬಾದ್ ಸಂಸ್ಥಾನಕ್ಕೆ ಯಾವುದು ಅತಿ ಅವಶ್ಯಕವಾಗಿದೆ ಎಂದು ಮನಗಂಡು ತಾನಿದ್ದ ಅಲ್ಪ ಅವಧಿಯಲ್ಲಿಯೇ ಹೈದರಾಬಾದಿಗೆ ಇದ್ದ ದೊಡ್ಡ ಕೊರತೆಯನ್ನು ನಿವಾರಿಸಲು ಅವರು ಬಹಳ ಪ್ರಯತ್ನಿಸಿದರು. ಹೈದರಾಬಾದ್ ಸಮುದ್ರತೀರ ಮತ್ತು ಬಂದರು ಇಲ್ಲದ ರಾಜ್ಯ. ಆಧುನಿಕ ಕಾಲದಲ್ಲಿ ವ್ಯಾಪಾರ ವಹಿವಾಟಿಗೆ ಇದೊಂದು ದೊಡ್ಡ ಕೊರತೆ. ಇದನ್ನು ನಿವಾರಿಸಲು ನಿಜಾಮರ ಒಪ್ಪಿಗೆಯನ್ನು ಪಡೆದುಕೊಂಡು ಕೆಲವು ಆಂಗ್ಲ ಪ್ರತಿಷ್ಠಿತರ ನೆರವಿನಿಂದ ಪೋರ್ಚುಗೀಸರಿಗೆ ಸೇರಿದ್ದ ಗೋವಾ ಪ್ರದೇಶವನ್ನು ಹೈದರಾಬಾದಿಗೆ ಸೇರಿಸಿಕೊಳ್ಳಲು ಪ್ರಯತ್ನಿಸಿದರು. ಆದರೆ ಸೈನಿಕ ಸಹಾಯದಿಂದ ಅದನ್ನು ವಶಪಡಿಸಿಕೊಳ್ಳುವುದು ಸಾಧ್ಯವಿಲ್ಲ ಎಂಬುದು ಅರ್ಥ ಮಾಡಿಕೊಂಡು ಹಣವನ್ನಾದರೂ ಕೊಟ್ಟು, ಈ ಪ್ರದೇಶವನ್ನು ಪಡೆಯಬೇಕೆಂದು ಯೋಜನೆಯನ್ನು ಹಾಕಿಕೊಡರು. ಈ ಯೋಜನೆಗೆ ನಿಜಾಮರ ಸಹಮತ ಕೂಡ ಇತ್ತು. ನಿಜಾಮ ಉಸ್ಮಾನ್ ಆಲೀಖಾನರಿಗೆ ಇದು ಬಹುದಿನದ ಆಸೆಯಾಗಿತ್ತು. ಯೋಜನೆಯಂತೆ ಹಣವನ್ನು ತೆಗೆದುಕೊಂಡು ಮಿರ್ಜಾ ಅವರು ಗೋವಾ ಪ್ರದೇಶಕ್ಕೆ ಹೋದರು. ಈ ಪ್ರಸ್ತಾವನೆಯಿಂದ ಪೋರ್ಚುಗೀಸ್ ಸರ್ಕಾರ ಹಿಂದೆ ಸರಿದು ಗೋವಾ ಪ್ರದೇಶವನ್ನು ಬಿಟ್ಟುಕೊಡಲು ಒಪ್ಪಲಿಲ್ಲ. ಇದರಿಂದ ಮಿರ್ಜಾ ಹಿಂದೆ ಜಗ್ಗದೆ ವ್ಯಾಪಾರಕ್ಕಾದರೂ ತೆರಿಗೆ ಪಡೆದು ಬಂದರು ಸೇವೆಯನ್ನು ನೀಡಬೇಕೆಂದು ಕೇಳಿಕೊಂಡರು. ಪೋರ್ಚುಗೀಸ್ ಸರ್ಕಾರ ಈ ಪ್ರಸ್ತಾವನೆಗೆ ಒಪ್ಪಿತು. ಒಪ್ಪಂದದಂತೆ ಸರಕು ಸಾಗಾಣಿಕೆ ಸುಗಮವಾಗಿ ನಡೆಯಲು ರೇವಿನ ಆಡಳಿತ ವ್ಯವಸ್ಥೆಯಲ್ಲಿ ಹೈದರಾಬಾದಿಗೆ ಅವಕಾಶ ಮಾಡಿಕೊಡುವುದಾಗಿತ್ತು. ಆದರೆ ಈ ಒಪ್ಪಂದ ಜಾರಿಗೆ ಬರುವ ಪೂರ್ವದಲ್ಲಿಯೇ

ಆಂತರಿಕ ಕಾರಣಗಳಿಂದ ಮಿರ್ಜಾ ಅವರು ಹೈದರಾಬಾದ್ ದಿವಾನ ಪದವಿಗೆ ರಾಜೀನಾಮೆ ನೀಡಬೇಕಾಯಿತು. ಆದರೂ ಕೂಡ ಇವರು ಮಾಡಿಕೊಂಡ ಈ ಒಪ್ಪಂದ ಯಶಸ್ವಿಯಾಯಿತು. ಇದು ಮಿರ್ಜಾ ಅವರ ದೊಡ್ಡ ಸಾಧನೆಯೇ ಆಗಿದೆ.

ಮಿರ್ಜಾ ಅವರು ಮಾಡಿಕೊಂಡ ಗೋಪ್ಯವಾಗಿದ್ದ ಈ ಒಪ್ಪಂದ ವಿಷಯವು ಬೆಳಕಿಗೆ ಬಂದದ್ದು ೧೯೫೪ರಲ್ಲಿ. ರಾಜ್ಯಸಭೆಯಲ್ಲಿ ಈ ಒಪ್ಪಂದ ದೇಶದ್ರೋಹಕರವಾಗಿದೆ, ಇದಕ್ಕೆ ಮಿರ್ಜಾ ಅವರೆ ಕಾರಣ ಎಂದು ಅವರ ಮೇಲೆ ಆಪಾದನೆ ಮಾಡಲಾಯಿತು. ಇದನ್ನರಿತ ಪಂಡಿತ ಜವಾಹರಲಾಲ ನೆಹರೂ ಅವರು ಈ ವಿಷಯದ ವಿವರಣೆ ಬಯಸಿ ಆಗಸ್ಟ್ ೩೧ರಲ್ಲಿ ಮಿರ್ಜಾ ಅವರಿಗೆ ಪತ್ರ ಬರೆದರು. ಇದಕ್ಕೆ ಉತ್ತರಿಸಿದ ಮಿರ್ಜಾ ಹೈದರಾಬಾದ್ ಹಾಗೂ ಸಮಗ್ರ ಭಾರತದ ಹಿತದೃಷ್ಟಿಯಿಂದ ಈ ಪ್ರಯತ್ನ ತಾನು ನಡೆಸಿದ್ದು ನಿಜವೆಂದು ತಿಳಿಸುತ್ತ ಇದು ಹೇಗೆ ದೇಶದ್ರೋಹವಾಗುತ್ತದೆ ಎಂದು ಪ್ರಶ್ನಿಸಿದರು. ವಿಶ್ವೇಶ್ವರಯ್ಯ ನವರು ಮೈಸೂರು ಸಂಸ್ಥಾನದಲ್ಲಿ ದಿವಾನರಾಗಿದ್ದಾಗ ಬೊಂಬಾಯಿ ಪ್ರಾಂತ್ಯಕ್ಕೆ ಸೇರಿದ್ದ ಭಟ್ಕಳವನ್ನು ಮೈಸೂರಿಗೆ ಸೇರಿಸಿಕೊಳ್ಳಲು ನಡೆಸಿದ ಪ್ರಯತ್ನ ದೇಶದ್ರೋಹವಾಗಿತ್ತೇ ಎಂದು ಅವರು ಪ್ರತಿಭಟಿಸಿದರು. ಗೋವಾ ಒಂದು ಆಯಕಟ್ಟಿನ ಬಂದರು ಹೊಂದಿದ ಪ್ರದೇಶ. ವ್ಯಾಪಾರದ ಅನುಕೂಲಕ್ಕಾಗಿ ಆ ಪ್ರದೇಶವನ್ನು ಪಡೆಯಲು ಯೋಜಿಸಲಾಗಿತ್ತು. ಇದು ಸಾಧ್ಯವಾಗದೇ ಹೋಗಿದ್ದರೆ ವಿಶಾಖಪಟ್ಟಣವನ್ನು ಪಡೆಯುವ ಯೋಜನೆಯೂ ಇತ್ತು. ಗೋವಾ ಹೈದರಾಬಾದಿಗೆ ಸೇರಿಕೊಂಡರೆ ಭಾರತಕ್ಕೆ ಅನುಕೂಲವಲ್ಲವೆ ಎಂದು ಪ್ರಶ್ನಿಸಿದರು. ಹೀಗೆ ತಾವು ಮಾಡಿದ ಕಾರ್ಯ ಅತ್ಯುತ್ತಮವಾಗಿತ್ತು ಎಂದು ಸಮರ್ಥಿಸಿಕೊಂಡರು.’

## ೫.೪. ಬೀರಾರ್ ಹೈದರಾಬಾದ್‌ಗೆ ಸೇರ್ಪಡೆ



ಬೀರಾರ್ ಪ್ರದೇಶವು ಒಂದು ಸಂಪದ್ಭರಿತವಾದ ಪ್ರಾಂತ್ಯವಾಗಿತ್ತು. ಇದು ಕುತುಬ್ ಷಾ ಮನೆತನದ ಆಳ್ವಿಕೆಯಿಂದ ಹೈದರಾಬಾದ್ ಪ್ರದೇಶದಲ್ಲಿಯೇ ವಿಲೀನವಾಗಿತ್ತು. ಮುಂದೆ ಮಧ್ಯಪ್ರದೇಶದ ಅರಸು ಮನೆತನಗಳು ಈ ಪ್ರದೇಶವನ್ನು ವಶಪಡಿಸಿಕೊಂಡರು. ಮೊಗಲರ ಸುಲ್ತಾನ ಔರಂಗಜೇಬನ ಆಳ್ವಿಕೆಯಲ್ಲಿ ಇದನ್ನು ಮೊಗಲರ ದಕ್ಷಿಣ ಪ್ರಾಂತ್ಯದಲ್ಲಿ ಸೇರಿಸಲಾಯಿತು. ದಕ್ಷಿಣ ಪ್ರಾಂತ್ಯದ ಪ್ರಾಂತ್ಯಾಧಿಕಾರಿ ಕುಲಿಚಖಾನನ ನೇತೃತ್ವದಲ್ಲಿ ಔರಂಗಜೇಬನ ಮರಣದ ನಂತರ ಆಸಫಜಹಾ ಮನೆತನ ಸ್ಥಾಪಿಸಿದನು. ಆ ಸಂದರ್ಭದಿಂದ ಈ ಬಿರಾರ್ ಪ್ರದೇಶವು ಆಸಫಜಹಾ ಮನೆತನದಲ್ಲಿ ಉಳಿಯಿತು. ಈ ಮನೆತನದ ನಿಜಾಮ ನಾಲ್ಕನೇ ನಾಸಿರುದ್ದೌಲ್ ಬಹದ್ದೂರ್‌ನ ಆಳ್ವಿಕೆಯಲ್ಲಿ ಲಾರ್ಡ್‌ಡೌಲ್‌ಹೌಸಿಯು ದುರಾಡಳಿತದ ನೆಪ ಮತ್ತು ನಿಜಾಮನು ಕಂಪನಿಗೆ ನೀಡಬೇಕಾದ ಎಂಟು ಲಕ್ಷ ರೂ.ಗಳ ಬಾಕಿ ಹಣಕ್ಕಾಗಿ ೧೮೫೩ರಲ್ಲಿ ಬಿರಾರ್ ಪ್ರಾಂತ್ಯವನ್ನು ವಶಪಡಿಸಿಕೊಂಡನು. ಮುಂದೆ ಆಳ್ವಿಕೆ ಮಾಡಿದ ನಿಜಾಮರು ಬಿರಾರ್ ಪ್ರದೇಶವನ್ನು ಮತ್ತೆ ವಾಪಸ್ಸು ಪಡೆಯಲು ಪ್ರಯತ್ನಿಸಿದರು. ಆದರೆ ಅದು ಸಾಧ್ಯವಾಗಿರಲಿಲ್ಲ. ಏಳನೇ ನಿಜಾಮ ಉಸ್ಮಾನ್ ಅಲಿಖಾನನ ಆಳ್ವಿಕೆಯ ಅವಧಿಯಲ್ಲಿ ದಿವಾನರಾಗಿದ್ದ ಮಿರ್ಜಾ ಅವರು ಹೈದರಾಬಾದ್ ಸಂಸ್ಥಾನವು

ಬಿರಾರರನ್ನು ಮರಳಿ ಪಡೆಯಲು ಪ್ರಯತ್ನಿಸಿದರು. ಬ್ರಿಟಿಶ್ ಅಧಿಕಾರಿಗಳೊಡನೆ ಈ ಬಗ್ಗೆ ಸಂಧಾನವನ್ನು ಮಾಡಿಕೊಂಡರು. ಬ್ರಿಟಿಶರ ಯಾವುದೇ ಸಾಲವನ್ನು ಇಟ್ಟುಕೊಳ್ಳದೆ ಎಲ್ಲಾ ಸಾಲವನ್ನು ತೀರಿಸಿ ಅವರ ಮನವನ್ನು ಒಲಿಸಿ ಈ ಪ್ರದೇಶವನ್ನು ವಾಪಸ್ಸು ಪಡೆದರು. ಇದರಿಂದ ಉಸ್ಮಾನ್ ಆಲಿಖಾನರಿಗೆ ತುಂಬಾ ಸಂತೋಷವಾಯಿತು. ಏಕೆಂದರೆ ಹೈದರಾಬಾದ್ ಸಂಸ್ಥಾನಕ್ಕೆ ಒಂದು ಸಂಪದ್ಭರಿತ ಪ್ರಾಂತವು ಸೇರಿಕೊಂಡಿತು. ಈ ಪ್ರದೇಶ ಸೇರಿಕೊಂಡಿದ್ದರಿಂದ ಸಂಸ್ಥಾನದ ಆದಾಯವು ಇಮ್ಮಡಿಯಾಗಿ ಪ್ರಗತಿಗೆ ತುಂಬ ಸಹಕಾರಿ ಯಾಯಿತು. ಇದು ಮಿರ್ಜಾ ಅವರ ಸಾಧನೆಯಲ್ಲಿ ಅತ್ಯಂತ ಪ್ರಮುಖವಾದದ್ದು.[೫]

## ೫.೫. ಆಡಳಿತ ಸುಧಾರಣೆ

ಮಿರ್ಜಾ ಅವರು ಮೈಸೂರು ಮತ್ತು ಜಯಪುರ ಸಂಸ್ಥಾನದಲ್ಲಿ ಮಾಡಿದ ಸುಧರಣೆಯ ಮಾದರಿಯನ್ನು ಹೈದರಾಬಾದ್‌ನಲ್ಲಿಯೂ ಅಳವಡಿಸಿಕೊಂಡಿದ್ದರು. ಇವರು ದಿವಾನರಾಗಿ ಬರುವುದಕ್ಕಿಂತ ಮುಂಚೆ ಆಡಳಿತ ಕುಂಠಿತವಾಗಿತ್ತು. ಇದನ್ನು ಅರಿತುಕೊಂಡಿದ್ದ ಮಿರ್ಜಾ ಅವರು ಹೈದರಾಬಾದ್ ಅಭಿವೃದ್ಧಿಯಾಗ ಬೇಕಾದರೆ ಮೊದಲು ಆಡಳಿತದಲ್ಲಿ ಕೆಲವು ಬದಲಾವಣೆಯನ್ನು ಮಾಡಬೇಕಾಗುತ್ತದೆ ಎಂದು ತಿಳಿದು ಹಲವಾರು ಬದಲಾವಣೆಯನ್ನು ತಂದು ಭದ್ರವಾದ ಆಡಳಿತವನ್ನು ನೀಡಲು ಅನುಕೂಲವಾಗುವಂತೆ ವ್ಯವಸ್ಥೆಯನ್ನು ಮಾಡಿದರು. ಮೊದಲು ಶಿಸ್ತು, ದಕ್ಷತೆಯನ್ನು ತರಲು ಪ್ರಯತ್ನಿಸಿದರು. ಇದು ಕಂಡಾಗ ಮಾತ್ರ ಅಭಿವೃದ್ದಿಯಾಗುತ್ತದೆಯೇ ವಿನಾ ಶಿಸ್ತು ಇಲ್ಲದಿದ್ದರೆ ಕುಂಠಿತ ಖಂಡಿತವೆಂದು ಹೇಳುತ್ತಿದ್ದರು. ಸಂಸ್ಥಾನದ ಆಡಳಿತದಲ್ಲಿದ್ದ ಸ್ವಜನ ಪಕ್ಷಪಾತವನ್ನು ಹೋಗಲಾಡಿಸಲು ಪ್ರಯತ್ನಿಸಿದರು. ಆಡಳಿತದ ಬಗ್ಗೆ ಜಾಗೃತಿ ಮೂಡಿಸಿ ಜನರು ಕೂಡ ಆಡಳಿತದಲ್ಲಿ ಭಾಗವಹಿಸುವಂತೆ ಮಾಡಿ ಸಂಸ್ಥಾನವನ್ನು ಅಭಿವೃದ್ಧಿಯತ್ತ ಸಾಗುವಂತೆ ಮಾಡಿದರು. ಹಿಂದೂ, ಮುಸ್ಲಿಂ ಎಂಬ ಭೇದಭಾವ ಮಾಡದೆ ಎಲ್ಲರನ್ನೂ ಸಮಾನವಾದ ರೀತಿಯಲ್ಲಿ ನೋಡುತ್ತಾ ಆಡಳಿತದಲ್ಲಿ ಅರ್ಹತೆಯ ಹಾಗೂ ಅನುಭವದ ಅಧಿಕಾರಿಗಳನ್ನು ನೇಮಿಸಿಕೊಳ್ಳುತ್ತಿದ್ದರು. ಇದು ಕಾಸಿಂ ರಜ್ವಿ ಮತ್ತು ರಜಾಕಾರರಿಗೆ ಇಷ್ಟವಾಗುತ್ತಿರಲಿಲ್ಲ. ಆದ್ದರಿಂದ ಅವರು ಮಿರ್ಜಾ ಅವರನ್ನು ಮುಸ್ಲಿಂ ವಿರೋಧಿ, ಹಿಂದೂಗಳ ಪರವಾಗಿದ್ದಾರೆ ಎಂದು ನಿಜಾಮರಿಗೆ ಚಾಡಿ ಹೇಳಿ ನಂಬಿಸುವಂತೆ ಮಾಡಿದರು. ನಿಜಾಮರು ಸತ್ಯಾಸತ್ಯೆಯನ್ನು ಅರ್ಥ ಮಾಡಿಕೊಳ್ಳದೆ ಮಿರ್ಜಾ ಅವರನ್ನು ಕರೆಸಿ ವಿಚಾರಿಸಿದಾಗ ಅದಕ್ಕೆ ಮಿರ್ಜಾ ಅವರು ಸಮರ್ಥನೆಯನ್ನು ಮಾಡಿಕೊಂಡರು. ಇದರಿಂದ ಇನ್ನೂ ಕೋಪಗೊಂಡ ರಜಾಕಾರರು ಆಡಳಿತದಲ್ಲಿ ಕೆಲವು ಅಧಿಕಾರಿಗಳನ್ನು ತಮ್ಮ ಪರವಾಗಿ ಮಾಡಿಕೊಂಡು ಆಡಳಿತದಲ್ಲಿ ಮಿರ್ಜಾ ಅವರಿಗೆ ಸಹಕರಿಸಬಾರದೆಂದು ಹೇಳಿದರು. ರಜಾಕಾರರ ಮಾತು ಕೇಳಿ ಕೆಲವು ರಜಾಕಾರರ ಪರ ಅಧಿಕಾರಿಗಳು, ಆಡಳಿತದಲ್ಲಿ ಸಹಕಾರ ನೀಡದೆ ಮಿರ್ಜಾ ಅವರ ವಿರುದ್ಧ ಕೆಲಸ ಮಾಡಲು ಪ್ರಾರಂಬಿಸಿದರು. ಇದರಿಂದ ಸಂಸ್ಥಾನದ ಆಡಳಿತ ಕುಸಿಯಿತು. ಹೈದರಾಬಾದ್ ವಿನಾಶದ ಹಾದಿಯಲ್ಲಿ ಬಹುದೂರ ಸಾಗಿತು. ನಿಜಾಮನ ಸಂಸ್ಥಾನದಲ್ಲಿ ಜನಪರ ಹಾಗೂ ದಕ್ಷ ಅಧಿಕಾರಿಗಳಿಗೆ

ಆಡಳಿತದಲ್ಲಿ ಸ್ಥಾನವಿರಲಿಲ್ಲ. ಹೈದರಾಬಾದಿಗೆ ಮಿರ್ಜಾ ಬೇಕಿರಲಿಲ್ಲ. ಮಿರ್ಜಾ ಅವರಿಗೆ ಈ ಸ್ಥಿತಿಯಲ್ಲಿ ಕೆಲಸ ಮಾಡುವುದೂ ಸಾಧ್ಯವಿರಲಿಲ್ಲ. ಅವರು ತಮ್ಮ ಸ್ಥಾನವನ್ನು ತ್ಯಜಿಸುವುದು ಅನಿವಾರ್ಯವಾಯಿತು. ಅವರು ಅಲ್ಲೇ ಉಳಿದಿದ್ದರೆ ಆವರಿಗೆ ಅವಮಾನ ಮಾತ್ರವಲ್ಲ ಪ್ರಾಣಾ ಪಾಯವೂ ಉಂಟಾಗುತ್ತಿತ್ತು. ಹೀಗೆ ಹೈದರಾಬಾದಿನ ದುರಾಡಳಿತವನ್ನು ಸಹಿಸದೆ, ಅದನ್ನು ಸುಧಾರಿಸಲೂ ಸಾಧ್ಯವಾಗದೆ ಹೊರಗೆ ಬಂದ ಅಧಿಕಾರಿಗಳಲ್ಲಿ ಮಿರ್ಜಾ ಒಬ್ಬರೇ ಆಗಿರಲಿಲ್ಲ. ಹಿಂದೆ ಇದೇ ಸಂಸ್ಥಾನದಲ್ಲಿ ನವಾಬ್ ಚೂರಿ ಕೂಡ ರಾಜೀನಾಮೆ ಕೊಟ್ಟು ಹೊರಬಂದಿದ್ದರು.[೬]

## ೫.೬. ಕೇಂದ್ರದೊಂದಿಗೆ ಸ್ಟಾಂಡ್‌ಸ್ಟೀಲ್ ಒಪ್ಪಂದ

ಮಿರ್ಜಾ ಅವರು ಎಲ್ಲ ಧರ್ಮೀಯರನ್ನೂ ಒಳಗೊಂಡು ಹೈದರಾಬಾದ್ ಸಂಸ್ಥಾನವನ್ನು ಉಳಿಸಿ ಬೆಳೆಸುವ ತನ್ನ ಕಾರ್ಯವನ್ನು ಮುಂದುವರಿಸಿದರು. ಆದರೆ ಮಿಜ್ಲಿಸ್ ಶಾಸಕಾಂಗ ಸಭೆಯಲ್ಲಿ ರಜಾಕಾರರು ಹಿಂದೂಗಳಿಗೆ ಅವಕಾಶ ನೀಡಲಿಲ್ಲ. ಅದಕ್ಕೆ ಆಕ್ಷೇಪ ಎತ್ತಿ ಶಾಸಕಾಂಗದಲ್ಲಿ ಹಿಂದೂಗಳು, ಭಾಗವಹಿಸಲಿಲ್ಲ ಎಂದು ಮಿರ್ಜಾ ಹೇಳಿದಾಗ ಇವರ ಮಾತಿಗೆ ಯಾವುದೇ ಮನ್ನಣೆ ಸಿಗಲಿಲ್ಲ. ಕಾಸಿಂ ರಜ್ವಿಯು ಹೈದರಾಬಾದನ್ನು ಮುಸ್ಲಿಂ ಸಂಸ್ಥಾನವನ್ನಾಗಿ ಮಾಡುವುದು ಮಾತ್ರವಲ್ಲ ಇಡೀ ಭಾರತದಲ್ಲಿ ಜನಸಂಖ್ಯಾ ಬಾಹುಳ್ಯವಿರುವ ಪ್ರದೇಶವನ್ನು ಒಟ್ಟುಗೂಡಿಸಿ ಸ್ವತಂತ್ರ ದೇಶವನ್ನು ಮಾಡುವುದೇ ತನ್ನ ಗುರಿಯೆಂದು ಘೋಷಿಸಿದ್ದ. ಹೈದರಾಬಾದ್ ಇಂಡಿಯಾ ಒಕ್ಕೂಟವನ್ನು ಸೇರಬೇಕೆಂಬ ಸಲಹೆಯನ್ನು ತಳ್ಳಿ ಹಾಕಿ ಮಹಮ್ಮದೀಯ ರಾಜ್ಯ ಮಾಡುವುದಾಗಿ ರಜಾಕಾರರು ನಿರ್ಧರಿಸಿದರು. ಇದರಿಂದ ಮಿರ್ಜಾ ಅವರಿಗೆ ತುಂಬಾ ನೋವಾಯಿತು. ಅವರು ನಿಜಾಮ ಮತ್ತು ರಜಾಕಾರರಿಗೆ ತಿಳಿ ಹೇಳಲು ಪ್ರಯತ್ನಿಸಿದರು. ಆದರೆ ಆ ಪ್ರಯತ್ನ ವಿಫಲವಾಯಿತು. ಅವರ ಮಾತಿಗೆ ರಜಾಕಾರರು ಮತ್ತು ಕಾಸಿಂ ರಜ್ವಿ ಮನ್ನಣೆ ನೀಡಲಿಲ್ಲ. ನಿಜಾಮನು ಕೂಡ ರಜಾಕಾರರ ಕೈಗೊಂಬೆಯಾಗಿದ್ದ. ಆತ ಸ್ವತಂತ್ರವಾದ ತೀರ್ಮಾನವನ್ನು ತೆಗೆದುಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಇಂತಹ ಉಸಿರುಕಟ್ಟುವ ವಾತಾವರಣದಲ್ಲಿ ಮಿರ್ಜಾ ಅವರು ಹೇಗಾದರೂ ಮಾಡಿ ಹೈದರಾಬಾದನ್ನು ಭಾರತದ ವಿರುದ್ಧ ಹೋಗದ ಹಾಗೇ ಮಾಡಬೇಕೆಂದು ತೀರ್ಮಾನಿಸಿ ಈ ಕುರಿತಾಗಿ ಭಾರತದ ರಾಷ್ಟ್ರೀಯ ನಾಯಕರೊಂದಿಗೆ ಚರ್ಚಿಸಿದರು. ಕೇಂದ್ರದಲ್ಲಿ ಅಧಿಕಾರಿದಲ್ಲಿದ್ದ ತಾತ್ಕಾಲಿಕ ಸರ್ಕಾರದ ಜೊತೆ ಸ್ಟಾಂಡ್‌ಸ್ಟೀಲ್ ಒಪ್ಪಂದ ಮಾಡಿಕೊಂಡು ರಾಜ್ಯಕ್ಕೆ ಒದಗಿಬಂದಿದ್ದ ಗಂಡಾಂತರವನ್ನು ತಾತ್ಕಾಲಿಕವಾಗಿ ದೂರ ಮಾಡಿದರು.[೭]

## ೫.೭. ರಾಜಕೀಯ ಸುಧಾರಣೆ

ಮಿರ್ಜಾ ಅವರು ಹೈದರಾಬಾದಿನ ದಿವಾನರಾಗಿ ನೇಮಕವಾದ ಸಂದರ್ಭದಲ್ಲಿ ಶ್ರೀಮತಿ ಸರೋಜಿನಿ ನಾಯ್ಡು ಅವರ ಪುತ್ರಿ ಪದ್ಮಜನಾಯ್ಡು ಅವರು ಹೈದರಾಬಾದಿನ ಹಲವು ಗ್ರಾಮಗಳಲ್ಲಿ ನಡೆಯುತ್ತಿದ್ದ

ರಾಜಕೀಯ ಕಗ್ಗೊಲೆಯ ವಿವರಗಳನ್ನು ಮಹಾತ್ಮರಿಗೆ ವರದಿ ಮಾಡಿದರು. ಈ ವರದಿಯನ್ನು ಆಧರಿಸಿ ಗಾಂಧೀಜಿಯವರು ಹೈದರಾಬಾದಿನ ರಾಜಕೀಯ ಸಮಸ್ಯೆಯನ್ನು ಸರಿಪಡಿಸಬೇಕೆಂದು ಮಿರ್ಜಾ ಅವರಿಗೆ ಸಲಹೆ ನೀಡಿದರು. ಇದಕ್ಕೆ ಉತ್ತರಿಸುತ್ತ ನಾನು ಅಧಿಕಾರ ಸ್ವೀಕರಿಸಿದ್ದೇನೆ ಹೈದರಾಬಾದ್ ಎದುರಿಸುತ್ತಿರುವ ಹಲವಾರು ಸಮಸ್ಯೆಗಳ ಅಧ್ಯಯನ ಮಾಡುತ್ತಿರುವೆ. ಅವುಗಳಲ್ಲಿ ರಾಜಕೀಯ ಸುಧಾರಣೆಯೂ ಒಂದಾಗಿದೆ. ಈ ಸಮಸ್ಯೆಯನ್ನು ನಿವಾರಿಸಿ ಮೈಸೂರು, ಬರೋಡಾ, ಜಯಪುರಗಳಂತೆ ಅಭಿವೃದ್ಧಿಯನ್ನು ಮಾಡುತ್ತೇನೆ. ಅದಕ್ಕೆ ಕಾಲಾವಕಾಶ ಬೇಕಾಗುತ್ತದೆ. ಸಂಸ್ಥಾನದ ರಾಜಕೀಯ ಸಮಸ್ಯೆಯನ್ನು ಪರಿಹರಿಸಲು ಪ್ರತ್ಯೇಕ ಮಾರ್ಗವನ್ನೇ ಅನುಸರಿಸಬೇಕಾಗಿದೆ. ಇದರ ಬಗ್ಗೆ ನಿಜಾಮರು ಕೂಡ ತುಂಬ ಉತ್ಸುಕರಾಗಿದ್ದಾರೆ ಎಂದು ಗಾಂಧೀಜಿಗೆ ಹೇಳಿದರು.

ಗಾಂಧೀಜಿಯವರ ಸಲಹೆಯಂತೆ ಮಿರ್ಜಾ ಅವರು ಸಂಸ್ಥಾನದ ಅಭಿವೃದ್ಧಿಗೆ ಅಡ್ಡವಾಗಿರುವ ರಾಜಕೀಯ ಸಂಸ್ಥೆಗಳ ಚಲನವಲನಗಳನ್ನು ನೋಡಿ ಅವುಗಳ ಕಾರ್ಯಗಳನ್ನು ನಿಯಂತ್ರಿಸಲು ಪ್ರಯತ್ನಿಸಿದರು. ಇದರಿಂದ ಕೊಪಗೊಂಡ ಇತ್ತೇಹಾದ್ ಸಂಘಟನೆಯ ಕಾರ್ಯಕರ್ತರಾದ ರಜಾಕಾರರು ಮಿರ್ಜಾ ಅವರ ಮೇಲೆ ಇಲ್ಲಸಲ್ಲದ ಆರೋಪ ಮಾಡಿ ಅವರು ಕಾಂಗ್ರೆಸ್ ಏಜೆಂಟರಂತೆ ವರ್ತಿಸುತ್ತಿದ್ದಾರೆ, ಕಾಂಗ್ರೆಸ್ ಬಗ್ಗೆ ಒಳ್ಳೆಯ ಅಭಿಪ್ರಾಯ ಹೊಂದಿದ್ದಾರೆ, ಮುಸ್ಲಿಂ ಸಂಘಟನೆಯಾದ ಇತ್ತೇಹಾದ್ ಮೇಲೆ ಸುಳ್ಳು ಆರೋಪ ಮಾಡುತ್ತಿದ್ದಾರೆ ಎಂದು ನಿಜಾಮರಿಗೆ ಮನವಿ ಮಾಡಿದರು. ರಜಾಕಾರರ ಮಾತಿನಂತೆ ನಿಜಾಮ ಮಿರ್ಜಾ ಅವರನ್ನು ಕರೆಯಿಸಿ ಮುಸ್ಲಿಂ ಸಂಘಟನೆ ಮೇಲೆ ಸುಳ್ಳು ಆರೋಪ ಮಾಡಬೇಡಿ, ಅದು ಆಸಫಜಹಾ ಮನೆತನದ ರಕ್ಷಣೆಯ ಸಂಘಟನೆಯಾಗಿದೆ ಎಂದರು. ಮುಂದೊಂದಿನ ಈ ಸಂಘಟನೆಯಿಂದಲೆ ಆಸಫಜಹಾ ಮನೆತನ ಅಧಿಕಾರ ಕಳೆದುಕೊಂಡಿತ್ತು.[೮]

### ೫.೮. ಲೆಜಿಸ್ಲೇಟಿವ್ ಕೌನ್ಸಿಲ್‌ನ ಸುಧಾರಣೆ

ಸರ್ ಮಿರ್ಜಾ ಎಂ ಇಸ್ಮಾಯಿಲ್ ತಮ್ಮ ಪ್ರಭುಗಳ ಮನೋಭಾವವನ್ನು ಚೆನ್ನಾಗಿ ತಿಳಿದು ಕೊಂಡಿರಲಿಲ್ಲ. ಹೈದರಾಬಾದಿನಲ್ಲಿ ವಿಶಿಷ್ಟವಾದತಂಹ ಸುಧಾರಣೆಗಳನ್ನು ಜಾರಿಗೆ ತರಬೇಕೆಂಬುದು ಅವರ ನಿರೀಕ್ಷೆಯಾಗಿತ್ತು. ೧೨೨ ಸದಸ್ಯರನ್ನೊಳಗೊಂಡ ಲೆಜಿಸ್ಲೇಟಿವ್ ಕೌನ್ಸಿಲ್ ಸ್ಥಾಪಿಸಿ ಅದರ ಒಟ್ಟು ಸದಸ್ಯರಲ್ಲಿ ೭೬ ಸದಸ್ಯರನ್ನು ಮಾತ್ರ ಚುನಾವಣೆಯ ಮುಖಾಂತರ ನೇಮಿಸುವುದು ಹಾಗೂ ಇನ್ನು ಉಳಿದ ಸದಸ್ಯರನ್ನು ನಾಮಕರಣ ಮಾಡುವ ಮೂಲಕ ನೇಮಿಸುವುದು ಎಂಬುದಾಗಿ ತೀರ್ಮಾನಿಸಲಾಗಿತ್ತು. ೭೬ ಸದಸ್ಯರಲ್ಲಿ ೩೮ ಸದಸ್ಯರು ಮುಸ್ಲಿಂಮೇತರರನ್ನು ಮತ್ತು ೩೮ ಸದಸ್ಯರು ಮುಸ್ಲಿಮರನ್ನು ಆರಿಸಬೇಕಾಗಿತ್ತು. ಮುಸ್ಲಿಮರು ಮತ್ತು ಮುಸ್ಲಿಮೇತರರ ನಡುವೆ ೫೦:೫೦ ಪ್ರಮಾಣದ ಒಪ್ಪಂದದ ಆಧಾರದ ಮೇಲೆ ಲೆಜಿಸ್ಲೇಟಿವ್ ಕೌನ್ಸಿಲ್ ಚುನಾವಣೆ ನಡೆಯಬೇಕಾಗಿತ್ತು. ಆದರೆ ಇಲ್ಲಿ ಒಂದು ಷರತ್ತಿತ್ತು. ಅದೇನೆಂದರೆ ಚುನಾಯಿತ ನಾಗಲಿರುವ ಅಭ್ಯರ್ಥಿ ತಮ್ಮ ಕೋಮಿನ ಜನರಿಂದಲೇ ಶೇ.೫೧ರಷ್ಟು ಮತಗಳನ್ನು ಪಡೆದಿರಬೇಕು.

ಇದರ ಪರಿಣಾಮವಾಗಿ ಚುನಾಯಿತರಾದ ಸದಸ್ಯರಲ್ಲಿ ಬಹುತೇಕ ಮಂದಿ ಇತ್ತೇಹಾದ್‌ಗೆ ಸೇರಿದವರಾಗಿದ್ದರು. ಏಕೆಂದರೆ ಕೋಮಿನ ಆಧಾರದ ಮೇಲೆ ಚುನಾವಣೆ ಮಾಡುವುದನ್ನು ಕಾಂಗ್ರೆಸ್ ವಿರೋಧಿಸಿ ಚುನಾವಣೆ ಕಣದಿಂದ ದೂರ ಉಳಿಯಿತು. ಇದರಿಂದ ಮುಸ್ಲಿಮರು ಬಾರಿ ಬಹುಮತದಿಂದ ಗೆದ್ದು ಬಂದರು. ಮಿರ್ಜಾ ಅವರು ಸಂಸ್ಥಾನದ ಶೇ.೮೫ ಜನಸಂಖ್ಯೆಯಿದ್ದ ಹಿಂದೂಗಳು ಸಹ ಶಾಸಕಾಂಗದಲ್ಲಿ ಭಾಗವಹಿಸಬೇಕು, ಹಿಂದೂಗಳಿಗೂ ಸಹ ಮಂತ್ರಿ ಪದವಿ ದೊರೆಯಬೇಕೆಂದು ಸಲಹೆ ಮಾಡಿದರು. ಆದರೆ ಮಜ್ಲಿಸ್ ಅದನ್ನು ವಿರೋಧಿಸಿತು. ಮಿರ್ಜಾ ಅವರ ಧರ್ಮನಿರಪೇಕ್ಷಿತ ನೀತಿಗೆ ನಿಜಾಮನ ರಾಜ್ಯದಲ್ಲಿ ಸ್ಥಾನವಿರಲಿಲ್ಲ.[೯]

### ೫.೯. ಮಾರುಕಟ್ಟೆ ಇಲಾಖೆ ಸುಧಾರಣೆ

ಮಿರ್ಜಾ ಅವರು ದಿವಾನರಾಗಿ ನೇಮಕವಾದ ಮೇಲೆ ಹೈದರಾಬಾದ್ ಸಂಸ್ಥಾನದ ಮಾರುಕಟ್ಟೆಯಲ್ಲಿ ಕೆಲವು ಸುಧಾರಣೆಗಳನ್ನು ಮಾಡಿದರು. ತಾವು ಅಧಿಕಾರವನ್ನು ವಹಿಸಿಕೊಂಡಾಗ ಸಂಸ್ಥಾನದ ದಕ್ಷಿಣ ಭಾಗದ ಕೆಲವು ಪ್ರದೇಶಗಳಲ್ಲಿ ಭೀಕರ ಬರಗಾಲ ಬಂದಿತ್ತು. ಈ ಬರಗಾಲಕ್ಕೆ ತುತ್ತಾದ ಜಿಲ್ಲೆಗಳೆಂದರೆ ರಾಯಚೂರು, ಬೀದರ್ ಹಾಗೂ ಗುಲಬರ್ಗಾ ಪ್ರದೇಶಗಳು. ಇದನ್ನು ಅತಿ ಸೂಕ್ಷ್ಮವಾಗಿ ಅವಲೋಕಿಸಿ ಮಿರ್ಜಾ ಅವರು ಈ ಭಾಗದ ಮಾರುಕಟ್ಟೆಯಲ್ಲಿ ಅತಿ ಕಡಿಮೆ ಬೆಲೆಗೆ ದವಸಧಾನ್ಯಗಳು ಜನರ ಕೈಗೆ ಸಿಗುವಂತೆ ಮಾಡಿದರು. ಮಾರುಕಟ್ಟೆಯ ಮಾರಾಟಗಾರರ ಮೇಲೆ ತೆರಿಗೆ ಕೂಡ ಕಡಿಮೆ ವಸೂಲಿ ಮಾಡಿದರು. ಸಂಸ್ಥಾನದ ಉಳಿದ ಭಾಗಗಳಲ್ಲಿ ತೆರಿಗೆ ಏರಿಕೆ ಪ್ರಮಾಣವಾಗಿತ್ತು. ಮಾರುಕಟ್ಟೆಯಲ್ಲಿ ವಸ್ತುಗಳು ಸರಿಯಾಗಿ ಜನರಿಗೆ ತಲುಪುವಂತೆ ಹಾಗೂ ಮಾರಾಟಗಾರರಿಂದ ಮೋಸವಾಗದಂತೆ ತಡೆಯಲು ಒಂದು ಸಮಿತಿಯನ್ನು ನೇಮಿಸಿ ಸಮಿತಿಯ ಮುಖಾಂತರ ಉತ್ತಮವಾದ ಮಾರುಕಟ್ಟೆ ವ್ಯವಸ್ಥೆ ಒದಗುವಂತೆ ಮಾಡಿದರು. ಹಾಗೇ ಕೃಷಿಕರಿಗೆ ತಮ್ಮ ದವಸ ಧಾನ್ಯಗಳನ್ನು ಶೇಖರಿಸಲು ಉಗ್ರಾಣಗಳಿದ್ದವು. ಉಗ್ರಾಣಗಳಲ್ಲಿ ಶೇಖರಿಸಿಡಲು ಅದಕ್ಕೆ ಶುಲ್ಕವನ್ನು ಕೊಡಬೇಕಾಗಿತ್ತು. ಇಂತಹ ಶುಲ್ಕ ರಾಜ್ಯದ ಆದಾಯದ ಒಂದು ಭಾಗವಾಗುತ್ತಿತ್ತು.[೧೦]

### ೫.೧೦. ಹುಸೇನ್ ಸಾಗರ ಸರೋವರದ ಅಭಿವೃದ್ಧಿ

ಹೈದರಾಬಾದ್ ಪ್ರದೇಶದ ಸಮೀಪದಲ್ಲಿ ಮೂಸಿ ನದಿಯು ಹರಿಯುತ್ತದೆ. ಇದು ಅತಿ ಪ್ರಮುಖವಾದ ನದಿಯಾಗಿದೆ. ಇದರ ಪಕ್ಕಕ್ಕೆ ಹೈದರಾಬಾದ್ ಮತ್ತು ಸಿಕಂದರಾಬಾದ್ ಅವಳಿ ನಗರಗಳಿವೆ. ಈ ನದಿಗೆ ಇಬ್ರಾಹಿಂ ಕುಲಿಕುತುಬ್ ಆಳ್ವಿಕೆಯ ಕಾಲದಲ್ಲಿ ಅಣೆಕಟ್ಟನ್ನು ನಿರ್ಮಿಸಲಾಯಿತು. ಇದರಿಂದ ಹೈದರಾಬಾದ್ ಮತ್ತು ಸಿಕಂದರಾಬಾದ್ ನಗರಗಳಿಗೆ ಕುಡಿಯುವ ನೀರು ಹಾಗೂ ನೀರಾವರಿಗೆ ಅನುಕೂಲವಾಯಿತು. ಸರೋವರದ ಸುತ್ತಲೂ ಕಟ್ಟೆಯನ್ನು ನಿರ್ಮಿಸಿ ಹುಲ್ಲುಗಾವಲಿನ ಉದ್ಯಾನವನ್ನು ಆಕರ್ಷಿಸುವಂತೆ ವ್ಯವಸ್ಥೆ ಮಾಡಿ ಅದರಲ್ಲಿ ರಾಜ್ಯದ ಪ್ರಮುಖ ವ್ಯಕ್ತಿಗಳ ಪ್ರತಿಮೆಗಳನ್ನು ನಿರ್ಮಿಸಲಾಯಿತು. ಈ ಸರೋವರದ ಸುತ್ತ ಕಟ್ಟೆಯ ಮೇಲೆ ಅಲ್ಲಲ್ಲಿ ತೊಟ್ಟಿಗಳನ್ನು ನಿರ್ಮಿಸಲಾಯಿತು. ಉದ್ಯಾನವನ್ನು ಪ್ರವೇಶಿಸುವ ದಾರಿಯಲ್ಲಿ

ಭವ್ಯವಾದ ಕಮಾನುಗಳ ಪ್ರವೇಶದ ಬಾಗಿಲುಗಳು ಸ್ವಾಗತಿಸುತ್ತವೆ. ಒಳಗಡೆ ಗ್ಯಾಂಬಾರ್ ವಿನ್ಯಾಸದ ಕಂಬಗಳಿದ್ದು, ಇವುಗಳ ಪಕ್ಕದಲ್ಲಿ ಗುಮ್ಮಟದ ಛಾವಣಿಯಿದೆ.

ಮಿರ್ಜಾ ಅವರು ಹೈದರಾಬಾದಿನ ದಿವಾನರಾಗಿದ್ದಾಗ ಈ ಸರೋವರಕ್ಕೆ ಇದ್ದ ಚಿಕ್ಕ ರಸ್ತೆಗಳನ್ನು ವಿಸ್ತರಿಸಿ ಉತ್ತಮವಾದ ದೊಡ್ಡ ಪ್ರಮಾಣದ ರಸ್ತೆಗಳನ್ನು ನಿರ್ಮಿಸಿ, ಚಿಕ್ಕ ತೊಟ್ಟಿಗಳನ್ನು ತೆಗೆದು ಹಾಕಿ ದೊಡ್ಡ ದೊಡ್ಡ ತೊಟ್ಟಿಗಳನ್ನು ನಿರ್ಮಿಸಿದರು. ಹಾಗೆ ಉದ್ಯಾನವನದಲ್ಲಿ ಅನೇಕ ಬದಲಾವಣೆ ಮಾಡಿ ಜನರನ್ನು ಆಕರ್ಷಿಸುವ ರೀತಿಯಲ್ಲಿ ಅಭಿವೃದ್ಧಿಪಡಿಸಿದರು. ಮುಂದೆ ೧೯೮೫ರಲ್ಲಿ ಇದೇ ಸರೋವರದ ಮಧ್ಯದಲ್ಲಿ ಏಕಶಿಲೆಯ ಬುದ್ಧನ ಪ್ರತಿಮೆಯನ್ನು ನಿಲ್ಲಿಸಲಾಯಿತು. ಇದು ಹೈದರಾಬಾದ್ ನಗರದಲ್ಲಿ ಜನಾಕರ್ಷಣೆಯ ಸ್ಥಾನವಾಗಿದೆ.[೧೧]

**ಟಿಪ್ಪಣಿಗಳು**

೧. ಚಿನ್ನಸ್ವಾಮಿ ಸೋಸಲೆ ಎನ್.(ಸಂ), ದಿವಾನ್ ಸರ್ ಮಿರ್ಜಾ ಎಂ ಇಸ್ಮಾಯಿಲ್ ಕಾಲದ ಮೈಸೂರು ಸಂಸ್ಥಾನ, ೨೦೧೨, ಪು.೪೯೪

೨. ದಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ, ಸ್ಟಡೀಸ್ ಆನ್ ದಿವಾನ್ ಸರ್ ಮಿರ್ಜಾ, ೧೯೯೭, ಪು.೬೨-೬೩

೩. ಸರ್ ಮಿರ್ಜಾ ಎಂ ಇಸ್ಮಾಯಿಲ್, ಮೈ ಪಬ್ಲಿಕ್ ಲೈಫ್, ಲಂಡನ್, ೧೯೫೪, ಪು.೧೦೪-೧೦೫

೪. ನಾರಾಯಣರಾವ್ ವಿ.ಎಸ್., ಮಿರ್ಜಾ ಎಂ ಇಸ್ಮಾಯಿಲ್ ಜೀವನ ಚರಿತ್ರೆ, ೧೯೭೫, ಪು.೧೨೧-೧೨೨

೫. ಚಿನ್ನಸ್ವಾಮಿ ಸೋಸಲೆ ಎನ್., ಪೂರ್ವೋಕ್ತ, ಪು.೪೯೪, ೪೯೫

೬. ಸರ್ ಮಿರ್ಜಾ ಎಂ ಇಸ್ಮಾಯಿಲ್, ಪೂರ್ವೋಕ್ತ, ಪು.೧೦೬, ೧೦೭

೭. ಚಿನ್ನಸ್ವಾಮಿ ಸೋಸಲೆ ಎನ್., ಪೂರ್ವೋಕ್ತ, ಪು.೪೯೪

೮. ದಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ, ಪೂರ್ವೋಕ್ತ, ಪು.೬೭. ೬೮

೯. ಮುನ್ನಿ ಕೆ.ಎಂ.(ಅನು), ಒಂದು ಯುಗದ ಅಂತ್ಯ, ೨೦೦೭, ಪು.೬೪

೧೦. ಆ್ಯನ್ವಲ್ ಅಡ್‌ಮಿನಿಸ್ಟ್ರೇಷನ್ ರಿಪೋರ್ಟ್ಸ್, ಗವರ್ನಮೆಂಟ್ ಪ್ರೆಸ್, ೧೯೪೭, ಪು.೧,೨,೩

೧೧. ಸರ್ ಮಿರ್ಜಾ ಎಂ ಇಸ್ಮಾಯಿಲ್, ಪೂರ್ವೋಕ್ತ, ಪು.೨೯೦

## ಅಧ್ಯಾಯ ಆರು

# ರಾಷ್ಟ್ರನಾಯಕರೊಂದಿಗೆ ಸಂಬಂಧ

೬.೧. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್

೬.೨. ಮಹಾತ್ಮ ಗಾಂಧಿ

೬.೩. ಮಹಮ್ಮದ್ ಅಲಿ ಜಿನ್ನಾ

## ಅಧ್ಯಾಯ ಆರು

## ರಾಷ್ಟ್ರನಾಯಕರೊಂದಿಗೆ ಸಂಬಂಧ

ಮಿರ್ಜಾ ಎಂ ಇಸ್ಮಾಯಿಲ್ ಪ್ರಗತಿಪರ ಅಭಿಪ್ರಾಯವನ್ನು ಹೊಂದಿದ ಜಾತ್ಯಾತೀತ ರಾಜಕಾರಣಿ. ಅವರಿಗೆ ಆಡಳಿತದಲ್ಲಿ ಅಗಾಧ ಸಾಮರ್ಥ್ಯವಿತ್ತು. ಅವರು ಮೈಸೂರು, ಜೈಪುರ ಮತ್ತು ಹೈದರಾಬಾದ್ ಸಂಸ್ಥಾನದ ಆಡಳಿತ ವ್ಯವಸ್ಥೆಯಲ್ಲಿ ಆಧುನಿಕತೆಯನ್ನು ತರುವ ಪ್ರಯತ್ನ ಮಾಡಿ ಬಹುಮಟ್ಟಿಗೆ ಯಶಸ್ವಿಯಾದರು. ಸಂಸ್ಥಾನಗಳಲ್ಲಿ ಬಹುಕಟ್ಟಿನ ಅಧಿಕಾರಿಯಾಗಿ ನಗರಾಭಿವೃದ್ಧಿ ಮತ್ತು ಗ್ರಾಮಾಭಿವೃದ್ಧಿ ಕಾರ್ಯಗಳಿಗೆ ಹೆಚ್ಚು ಒತ್ತು ನೀಡುತ್ತಿದ್ದರು. ಮಿರ್ಜಾ ಅವರು ಸ್ವಚ್ಛತೆ, ಪರಿಶುದ್ಧ ವಾತಾವರಣವನ್ನು ಸ್ಥಾಪಿಸಲು ಸದಾ ಪ್ರಯತ್ನಿಸುತ್ತಿದ್ದರು. ಸಂಸ್ಥಾನಗಳ ಜೊತೆ ಉತ್ತಮವಾದ ಸಂಬಂಧವನ್ನು ಇಟ್ಟುಕೊಂಡು ತಮ್ಮ ಅಧಿಕಾರ ವ್ಯಾಪ್ತಿಯಲ್ಲಿ ಉತ್ತಮವಾದ ಕೆಲಸವನ್ನು ಮಾಡಿ ತೋರಿಸಿದರು. ಇವರ ಅಧಿಕಾರದ ಅವಧಿಯಲ್ಲಿ ಸಂಸ್ಥಾನಗಳಲ್ಲಿ ಜವಾಬ್ದಾರಿ ಸರ್ಕಾರದ ಕೂಗು ಜೋರಾಯಿತು ಮತ್ತು ಭಾರತ ದೇಶದ ಸ್ವಾತಂತ್ರ್ಯ ಚಳುವಳಿಯು ಕೂಡ ಯಶಸ್ವಿಯತ್ತ ಸಾಗುತ್ತಿತ್ತು. ಇದರ ಪರಿಣಾಮದಿಂದ ಸಂಸ್ಥಾನದಲ್ಲಿ ಕೂಡ ಜನರು ಸ್ವಾತಂತ್ರ್ಯ ಮತ್ತು ಜವಾಬ್ದಾರಿ ಸರ್ಕಾರಕ್ಕಾಗಿ ಹಗಲು ಇರುಳು ಎನ್ನದೇ ಹೋರಾಟ ಮನೋಭಾವನೆಯನ್ನು ಬೆಳೆಸಿಕೊಂಡಿದ್ದರು. ಭಾರತ ದೇಶದ ರಾಷ್ಟ್ರನಾಯಕರ ಆದೇಶದ ಅನುಗುಣವಾಗಿ ಎಲ್ಲಾ ಸಂಸ್ಥಾನಗಳಲ್ಲಿ ಚಳುವಳಿಯು ಉಗ್ರವಾಗಿ ನಡೆಯಿತು. ಸಂಸ್ಥಾನದ ಆಳ್ವಿಕೆಯ ವಿರುದ್ಧ ಸಂಸ್ಥಾನದ ಜನತೆಯು ಸಹಕಾರ ಕೊಡದೆ ಅವರ ವಿರುದ್ಧ ಹೋರಾಡುತ್ತಿದ್ದರು. ಮೊದಮೊದಲು ಹೋರಾಟಗಳು ಚಿಕ್ಕ ಪ್ರಮಾಣದಲ್ಲಿ ಇದ್ದವು. ಹೋರಾಟದ ನೇತೃತ್ವ ವಹಿಸಲು ಒಂದು ಸಂಸ್ಥೆಯ ಅವಶ್ಯಕತೆ ಇತ್ತು. ಇಂತಹ ಸಂದರ್ಭದಲ್ಲಿ ಕಾಂಗ್ರೆಸ್ ಈ ಹೋರಾಟದ ನೇತೃತ್ವ ವಹಿಸಿಕೊಂಡು ಜನತೆಗೆ ಬಹುದಿನದ ಆಸೆಯನ್ನು ಈಡೇರಿಸಲು ಮುನ್ನುಗ್ಗುತ್ತಿರುವ ಸಂದರ್ಭದಲ್ಲಿ ಸಂಸ್ಥಾನದ ಸರ್ಕಾರವು ಕಾಂಗ್ರೆಸ್ ಮೇಲೆ ನಿಷೇಧ ವಿಧಿಸಿತು.ಯಾವುದೇ ಸಭೆ ಸಮಾರಂಭ ಮಾಡದಂತೆ ನಿಷೇದಾಜ್ಞೆ ಜಾರಿಗೆ ತರಲಾಯಿತು.. ಇಷ್ಟಾದರೂ ಕೂಡ ಜನರು ಇಂತಹ ಯಾವುದೇ ಬೆದರಿಕೆಗೆ ಅಂಜದೆ ತಮ್ಮ ಹೋರಾಟವನ್ನು ಮುಂದುವರಿಸಿದರು. ಇದರಿಂದ ಮತ್ತಷ್ಟು ಕೋಪಗೊಂಡ ಮಹಾರಾಜರು ಮತ್ತು ದಿವಾನರು ಕಾಂಗ್ರೆಸ್ ನಾಯಕರನ್ನು ಮತ್ತು

ಕಾರ್ಯಕರ್ತರನ್ನು ಸೆರಮನೆಗೆ ತಳ್ಳಿದರು. ಇಷ್ಟಾದರೂ ಕೂಡ ಕಾಂಗ್ರೆಸ್ ಕಾರ್ಯಕರ್ತರು ಹಿಂಜರಿಯದೆ ರಾಷ್ಟ್ರನಾಯಕರ ಕರೆಗೆ ಓಗೊಟ್ಟು ಸಂಸ್ಥಾನದ ವಿರುದ್ಧ ಘೋಷಣೆ ಕೂಗುತ್ತಾ, ಜೈಕಾರ ಹಾಕುತ್ತಾ ಪ್ರಭಾತ ಪೇರಿ ಹಾಕುತ್ತಿದ್ದರು.

ಕಾಂಗ್ರೆಸ್ ಕಾರ್ಯಕರ್ತರ ಹೋರಾಟದ ಫಲವಾಗಿ ಸಂಸ್ಥಾನವು ಸೆರೆಮನೆಯಲ್ಲಿದ್ದ ಸಂಸ್ಥಾನದ ಪ್ರಮುಖ ಕಾಂಗ್ರೆಸ್ ನಾಯಕರನ್ನು ಬಿಡುಗಡೆ ಮಾಡಿತು. ರಾಷ್ಟ್ರನಾಯಕರು ರಾಷ್ಟ್ರಮಟ್ಟದಲ್ಲಿ ಜಾರಿಗೆ ತಂದ ಪ್ರತಿಯೊಂದು ಹೋರಾಟದ ಅಸ್ತ್ರಗಳನ್ನು ಸಂಸ್ಥಾನದಲ್ಲಿಯೂ ಅನುಸರಿಸಲಾಯಿತು. ರಾಜ್ಯದ ಪ್ರಮುಖ ಕಾಂಗ್ರೆಸ್ ನಾಯಕರು ಸಂಸ್ಥಾನದಲ್ಲಿ ಜನರಿಗೆ ಜಾಗೃತಿ ಮೂಡಿಸುವ ಮೂಲಕ ಮತ್ತೆ ಸಂಸ್ಥಾನದ ವಿರುದ್ಧ ಹೋರಾಡುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ ಮಿರ್ಜಾ ಅವರು ಕಾಂಗ್ರೆಸ್ ಮೇಲೆ ಅರಸನ ಆಜ್ಞೆಯಂತೆ ನಿಷೇಧ ಹೇರಿದರು ಮತ್ತು ಕಾರ್ಯಕರ್ತರನ್ನು ಕಠಿಣವಾದ ಆಜ್ಞೆಗಳಿಂದ ನಿಯಂತ್ರಿಸಲು ಪ್ರಯತ್ನಿಸಿದರು. ಮಿರ್ಜಾ ಅವರು ಸಂಸ್ಥಾನದಲ್ಲಿದ್ದ ಕಾಂಗ್ರೇಸ್‌ನ್ನು ನಿಷೇಧಿಸಿದರು. ಆದರೆ ಅವರಿಗೆ ರಾಷ್ಟ್ರಮಟ್ಟದ ಕಾಂಗ್ರೆಸ್ ನಾಯಕರ ಬಗ್ಗೆ ಅತಿಯಾದ ಗೌರವವಿತ್ತು. ರಾಷ್ಟ್ರದ ನಾಯಕರಾದ ಮಹಾತ್ಮ ಗಾಂಧೀಜಿ ಅವರ ಆಚಾರ ವಿಚಾರಗಳಿಂದ ಪ್ರಭಾವಿತರಾಗಿ ಅವರ ಅಚ್ಚುಮೆಚ್ಚಿನ ಗೆಳೆಯರಾಗಿದ್ದರು. ಗಾಂಧೀಜಿಯವರ ಸ್ವದೇಶಿ ಚಳುವಳಿ, ಅಹಿಂಸಾ ಸತ್ಯಾಗ್ರಹ, ಉಪವಾಸ ವಿಚಾರಗಳಿಂದ ಪ್ರಭಾವಿತರಾಗಿ ದ್ದರು. ಜವಾಹರಲಾಲ್ ನೆಹರೂರವರಿಗೂ ಕೂಡ ಆತ್ಮೀಯರಾಗಿದ್ದರು ಮತ್ತು ಅವರ ಸಲಹೆಯನ್ನು ಯಾವಾಗಲೂ ತುಂಬು ಹೃದಯದಿಂದ ಸ್ವೀಕರಿಸುತ್ತಿದ್ದರು. ಮಿರ್ಜಾ ಅವರು ರಾಷ್ಟ್ರನಾಯಕರೊಂದಿಗೆ ಹೊಂದಿದ್ದ ಸಂಬಂಧದ ಸ್ವರೂಪ ಕುರಿತಾಗಿ ಇಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

### ೬.೧. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್

ಮಿರ್ಜಾ ಎಂ ಇಸ್ಮಾಯಿಲರು ಪ್ರಾರಂಭದಲ್ಲಿ ಕಾಂಗ್ರೆಸನ್ನು ಅಷ್ಟೊಂದು ಗಂಭೀರವಾಗಿ ಪರಿಗಣಿಸಿರಲಿಲ್ಲ. ಆದರೆ ಗಾಂಧೀಜಿ, ನೆಹರೂ ಹಾಗೂ ಪಟೇಲರು ಇವರ ಆಪ್ತಮಿತ್ರರಾಗಿದ್ದರು. ರಾಷ್ಟ್ರಮಟ್ಟದಲ್ಲಿ ಕಾಂಗ್ರೆಸ್ ಬ್ರಿಟಿಶರ ವಿರುದ್ಧ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನು ಪ್ರಾರಂಭಿಸಿದ ಕಾಲದಿಂದ ಮೈಸೂರು, ಹೈದರಾಬಾದ್ ಸಂಸ್ಥಾನದಲ್ಲಿ ಕೂಡ ಕೆಲವು ಸ್ವಾತಂತ್ರ್ಯ ಹೋರಾಟಗಾರರೂ ಕಾಂಗ್ರೆಸಿನ ಬಗ್ಗೆ ಒಲವನ್ನು ಬೆಳೆಸಿಕೊಂಡು ಸಂಸ್ಥಾನದ ಆಳ್ವಿಕೆಯ ವಿರುದ್ಧ ಹೋರಾಡಲು ಒಂದು ಸಂಘದ ಅವಶ್ಯಕತೆಯನ್ನು ಮನಗಂಡರು. ರಾಷ್ಟ್ರನಾಯಕರ ಆದೇಶದ ಅನುಗುಣವಾಗಿ ಸಂಸ್ಥಾನದಲ್ಲಿ ಹೋರಾಟದ ರೂಪರೇಷಗಳನ್ನು ಸಿದ್ಧಪಡಿಸಿಕೊಂಡಿದ್ದರು. ಇದರಿಂದ ಮಿರ್ಜಾ ಅವರು ಕಾಂಗ್ರೇಸ್ ಬಗ್ಗೆ ವಿಚಾರ ಮಾಡಬೇಕಾಯಿತು. ಮೊದಮೊದಲು ಸಂಸ್ಥಾನದಲ್ಲಿ ಕಾಂಗ್ರೆಸ್ ಪ್ರಾದೇಶಿಕ ಕಮಿಟಿ ಸ್ಥಾಪನೆ ಮಾಡುವುದಕ್ಕೆ ಒಪ್ಪಿಗೆ ನೀಡಲಿಲ್ಲ. ಇದರಿಂದ ಕೋಪಗೊಂಡ ಕಾರ್ಯಕರ್ತರು ಅರಸರ ವಿರುದ್ಧ ಘೋಷಣೆಯನ್ನು ಹಾಕುತ್ತಾ ಕಾಂಗ್ರೆಸ್‌ನ ರಾಷ್ಟ್ರೀಯ ನಾಯಕರಿಗೆ ಜೈಕಾರ ಹಾಕುತ್ತಾ ಸಂಸ್ಥಾನದ ತುಂಬೆಲ್ಲಾ ಪ್ರಭಾತಪೇರಿ ಮಾಡಿದರು. ಇದರಿಂದ

ಸಂಸ್ಥಾನದಲ್ಲಿದ್ದ ಜನತೆಗೆ ಕಾಂಗ್ರೆಸಿನ ಮೇಲೆ ಇನ್ನು ಅತಿಯಾದ ವಿಶ್ವಾಸ ಹುಟ್ಟಿಕೊಂಡಿತು. ಈ ಹೋರಾಟದಲ್ಲಿ ರೈತರು, ವಿದ್ಯಾರ್ಥಿಗಳು, ಸ್ತ್ರೀಯರು ಯಾವುದೇ ಜಾತಿಭೇದ ಎನ್ನದೆ ಒಗ್ಗಟ್ಟಿನಿಂದ ಸಂಸ್ಥಾನದ ಆಳ್ವಿಕೆಯ ವಿರುದ್ಧ ಹೋರಾಡಲು ಸಿದ್ಧರಾಗಿದ್ದರು. ಈ ವಿಷಯವನ್ನು ತಿಳಿದ ತಕ್ಷಣವೆ ಮಿರ್ಜಾರವರು ಅರಸರ ಆದೇಶದ ಮೇರೆಗೆ ಕಾಂಗ್ರೆಸಿನ ಈ ಹೋರಾಟದ ನಾಯಕತ್ವವನ್ನು ವಹಿಸಿದ ನಾಯಕರುಗಳನ್ನು ಬಂಧಿಸಿದರು. ಕೊನೆಗೆ ರಾಷ್ಟ್ರೀಯ ನಾಯಕರ ವಿಚಾರಗಳಿಂದ ಮತ್ತೆ ಕಾರ್ಯಕರ್ತರು ತಮ್ಮ ನಾಯಕರ ಬಿಡುಗಡೆಗಾಗಿ ಉಗ್ರಹೋರಾಟಕ್ಕೆ ಅಣಿಯಾದರು. ಇದನ್ನರಿತ ಮಿರ್ಜಾರವರು ಬಂಧನದಲ್ಲಿದ್ದ ಕಾಂಗ್ರೆಸ್ ನಾಯಕರನ್ನು ಬಿಡುಗಡೆ ಮಾಡಿದರು.[೧]

ಮಿರ್ಜಾ ಕಾಂಗ್ರೆಸ್ಸಿಗರನ್ನು ತತ್ವಭ್ರಷ್ಟ ಅಧಿಕಾರದಾಹಿಗಳು ಮತ್ತು ಸಮಯಸಾಧಕರೆಂದು ಟೀಕಿಸಿದರು. ರಾಜ್ಯದ ಕಾಂಗ್ರೆಸನ್ನು ಶುದ್ಧ ಬ್ರಾಹ್ಮಣೇತರರ ಚಳುವಳಿ, ಈ ಕಾಂಗ್ರೆಸ್‌ನ ನಾಯಕರು ಸ್ವಾರ್ಥ ಸಾಧಕ ರಾಗಿದ್ದು, ತಮ್ಮ ಆಶಯಗಳನ್ನಿಟ್ಟುಕೊಂಡು ಹೋರಾಟ ಮಾಡುತ್ತಿದ್ದಾರೆ, ರಾಜ್ಯದ ಏಳಿಗೆ ಇವರಿಗೆ ಇಷ್ಟವಿಲ್ಲವಾಗಿದೆ, ಅದಕ್ಕಾಗಿ ದಿನಕ್ಕೊಂದು ಹೋರಾಟ ಮಾಡುತ್ತಿದ್ದಾರೆ ಎಂದು ಬಲವಾಗಿ ಟೀಕಿಸಿದರು. ಮಿರ್ಜಾ ಅವರಿಗೆ ಕಾಂಗ್ರೆಸ್‌ನ ಕಾರ್ಯಕ್ರಮಗಳು ಹಾಗೂ ರೂಪುರೇಷಗಳನ್ನು ನೋಡಿ ಕಾಂಗ್ರೆಸ್‌ಗರು ಸಂಸ್ಥಾನದಲ್ಲಿ ಆಡಳಿತ ಮಾಡುವ ಕನಸು ಕಾಣುತ್ತಿದ್ದಾರೆ. ಇದು ನಾವು ಎಂದು ಸಹಿಸುವುದಿಲ್ಲ ಎಂದು ಖಡಾಖಂಡಿತವಾಗಿ ಹೇಳುತ್ತಿದ್ದರು. ರಾಷ್ಟ್ರಮಟ್ಟದಲ್ಲಿ ಕಾಂಗ್ರೆಸ್‌ನಲ್ಲಿ ಏನೇ ಬದಲಾವಣೆಗಳು ಆದರೂ ಕೂಡ ಸಂಸ್ಥಾನದಲ್ಲಿ ಯಾವುದೇ ಕಾರಣಕ್ಕೂ ಕಾಂಗ್ರೆಸ್ಸಿನ ಚಟುವಟಿಕೆಗಳು ಫಲಪ್ರದವಾಗುವುದಿಲ್ಲ. ಹಾಗೇ ಕಾಂಗ್ರೆಸಿನ ಜೊತೆ ಯಾವುದೇ ಒಪ್ಪಂದಕ್ಕೆ ಸಿದ್ಧವಾಗುವ ಪ್ರಶ್ನೆಯೇ ಬರುವುದಿಲ್ಲ ಎಂದು ಹೇಳುತ್ತಾ ಕಾಂಗ್ರೆಸ್ಸಿನ ಶಕ್ತಿಯನ್ನು ಕುಂಠಿತಗೊಳಿಸುವ ಸಲುವಾಗಿ ಅವರು ದಿನಾಲು ಹೊಸ ಹೊಸ ಯೋಜನೆಗಳನ್ನು ಹಾಗೂ ನಿಯಮಗಳನ್ನು ತರುವ ಮುಖಾಂತರ ಕಾಂಗ್ರೆಸಿನ ಬಲವನ್ನು ಸೀಮಿತಗೊಳಿಸಲು ಪ್ರಯತ್ನಿಸಿದರು. ಮತ್ತೆ ಸಂಸ್ಥಾನದಲ್ಲಿ ಯಾವುದೇ ತರಹದ ಧ್ವಜ ಚಳುವಳಿಯಾಗಲಿ, ಖಾದಿ ಪ್ರಚಾರವಾಗಲಿ, ಸಭೆ ಸಮಾರಂಭಕ್ಕೆ ಅವಕಾಶವನ್ನು ನೀಡದೆ ನಿಯಂತ್ರಿಸಿದರು. ಇದರಿಂದ ಕಾಂಗ್ರೆಸ್ ಕಾರ್ಯಕರ್ತರು ಮಿರ್ಜಾ ಎಂ ಇಸ್ಮಾಯಿಲ್ ವಿರುದ್ಧ ಮಹಾತ್ಮ ಗಾಂಧೀಜಿಯವರಿಗೆ ದೂರು ಮುಟ್ಟಿಸಿದರು. ಆ ದೂರನ್ನು ಸೂಕ್ಷ್ಮವಾಗಿ ಪರಿಶೀಲಿಸಿದ ಗಾಂಧೀಜಿಯವರು ಮಿರ್ಜಾ ಇಸ್ಮಾಯಿಲರಿಗೆ ಕಾರ್ಯಕರ್ತರ ಬಗ್ಗೆ ಮತ್ತು ಕಾಂಗ್ರೆಸ್‌ನ ಕಾರ್ಯಗಳ ಬಗ್ಗೆ ಮಾತನಾಡಿದಾಗ ಅದಕ್ಕೆ ಸ್ಪಂದಿಸುವುದಾಗಿ ಹೇಳಿದರು. ಆದರೂ ಕೂಡ ಮಿರ್ಜಾ ಅವರು ರಾಜಪ್ರಭುತ್ವವನ್ನು ಉಳಿಸುವುದಕ್ಕೋಸ್ಕರವಾಗಿ ಕಾಂಗ್ರೆಸಿಗರನ್ನು ದ್ವೇಷಿಸಲು ಪ್ರಾರಂಭಿಸಿದರು. ಇದರಿಂದ ರೊಚ್ಚಿಗೆದ್ದ ಕಾಂಗ್ರೆಸ್ ಕಾರ್ಯಕರ್ತರು ಇಸ್ಮಾಯಿಲ್‌ರು ರಾಜ್ಯದಲ್ಲಿ ಅಸಂತುಷ್ಟತೆಯನ್ನು ಸೃಷ್ಟಿಸಲು ಅವಿದ್ಯಾವಂತ ಹಳ್ಳಿಗರನ್ನು ಮತ್ತು ಮುಗ್ಧ ಶಾಲಾ ಹುಡುಗರನ್ನು ದಾರಿ ತಪ್ಪಿಸಲು ಇನ್ನಿಲ್ಲದ ಪ್ರಯತ್ನ ಮಾಡುತ್ತಿದ್ದಾರೆ ಎಂದು ಕಟುವಾಗಿ ಟೀಕಿಸಿದರು. ಇಂತಹ ಟೀಕೆಗಳಿಗೆ ಕಿವಿಕೊಡದೆ ಮಿರ್ಜಾ ಅವರು ಮಹಾರಾಜರ ಸಂಸ್ಥಾನವನ್ನು ಉಳಿಸಲು ಸಕಲ ಪ್ರಯತ್ನ ಮಾಡುತ್ತಿದ್ದರು.[೨]

ಮಿರ್ಜಾ ಎಂ ಇಸ್ಮಾಯಿಲ್‌ರಿಗೆ ರಾಷ್ಟ್ರೀಯ ಕಾಂಗ್ರೆಸ್‌ನ ನಾಯಕರೊಂದಿಗೆ ಉತ್ತಮವಾದ ಸಂಬಂಧ ಇದ್ದುದರಿಂದ ಸಂಸ್ಥಾನ ಕಾಂಗ್ರೆಸ್ ಕಾರ್ಯಕರ್ತರು ಮಾಡುತ್ತಿರುವ ಹೋರಾಟದ ಬಗ್ಗೆ ಹೆಚ್ಚಿನ ಆತಂಕ ಇರಲಿಲ್ಲ. ಇದರಿಂದಾಗಿ ಕಾರ್ಯಕರ್ತರು ಸಿಟ್ಟಿಗೆದ್ದು ರಾಷ್ಟ್ರನಾಯಕರ ವಿರುದ್ಧವೇ ಮಾತಾನಾಡಿ ಕಾಂಗ್ರೆಸ್ ರಾಜ್ಯದಲ್ಲಿ ಬೇಡ ಎನ್ನುವ ರೀತಿಯಲ್ಲಿ ವರ್ತಿಸಿದರು. ಈ ವಿಷಯ ವಿಕೋಪಕ್ಕೆ ಹೋಗಿದ್ದನ್ನು ಮನಗಂಡ ರಾಷ್ಟ್ರನಾಯಕರು ತೇಪೆ ಹಾಕುವ ಕೆಲಸ ಮಾಡಿದರು. ಮುಂದೆ ಬರುವ ಮದ್ರಾಸ್ ಕಾಂಗ್ರೆಸ್ ಅಧಿವೇಶನದಲ್ಲಿ ಈ ವಿಧಿಯ ಕುರಿತು ಚರ್ಚೆ ಮಾಡುವುದಾಗಿ ಹೇಳಿ ಕೈತೊಳೆದುಕೊಂಡರು. ಹೀಗೆ ಮಾಡುತ್ತಾ ಮಿರ್ಜಾ ಸಂಸ್ಥಾನದ ಆಳ್ವಿಕೆಯನ್ನು ವ್ಯವಸ್ಥಿತ ರೀತಿಯಲ್ಲಿ ಯಾವುದೇ ತೊಡಕು ಬರದ ರೀತಿಯಲ್ಲಿ ನಡೆಸಿದರು.

ಮೈಸೂರು ಸಂಸ್ಥಾನದಲ್ಲಿ ದಿವಾನರಾಗಿದ್ದಾಗ ಮಿರ್ಜಾರವರು ಕಾಂಗ್ರೆಸ್‌ನ ಮೇಲೆ ನಿಷೇಧ ಹೇರಿ ಅದರ ಬೆಳವಣಿಗೆ ಆಗದ ಹಾಗೆ ನೋಡಿಕೊಂಡಿದ್ದರು. ಇಲ್ಲಿ ಸಂಸ್ಥಾನದಲ್ಲಿ ಶಿವಪುರದ ಸತ್ಯಾಗ್ರಹ, ವಿದುರಾಶ್ವತ್ಥ ಘಟನೆ ಮುಂತಾದ ಘಟನೆಗಳನ್ನು ಪೋಲಿಸ್ ಪಡೆಯಿಂದ ನಿಯಂತ್ರಿಸಿದರು.[೩] ವಿದುರಾಶ್ವತ್ಥ ಘಟನೆಯಿಂದ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ಪ್ರಾಣವನ್ನು ಕಳೆದುಕೊಂಡಿದ್ದರು. ಇದರಿಂದ ಇದು ಕಾನೂನು ಆಯೋಗದಿಂದ ತನಿಖೆ ಆಗಬೇಕೆಂದು ಕಾಂಗ್ರೆಸ್ ಕಾರ್ಯಕರ್ತರು ಪಟ್ಟು ಹಿಡಿದು ಹೋರಾಟ ತೀವ್ರಗೊಳಿಸಿದರು. ಈ ಘಟನೆಯನ್ನು ತಿಳಿದ ಗಾಂಧೀಜಿಯವರು ತುಂಬಾ ಬೇಸರ ವ್ಯಕ್ತಪಡಿಸಿರು. ಆಯೋಗದ ವರದಿ ಬಂದ ಮೇಲೆ ಕಾಂಗ್ರೆಸ್‌ನ ರಾಷ್ಟ್ರೀಯ ನಾಯಕರೊಂದಿಗೆ ಒಂದು ಒಪ್ಪಂದ ಮಾಡಿಕೊಂಡ ಮಿರ್ಜಾರವರು ಈ ಒಪ್ಪಂದದಂತೆ ಜವಾಬ್ದಾರಿ ಸರಕಾರಕ್ಕೆ ಅನುಮತಿ ನೀಡಬೇಕು, ಹಾಗೇ ಈ ವಿದುರಾಶ್ವತ್ಥದಲ್ಲಿ ಕಾಂಗ್ರೆಸ್ ಕಾರ್ಯಕರ್ತರ ಮೇಲೆ ಹಾಕಿದ ಕೇಸುಗಳನ್ನು ಹಿಂದಕ್ಕೆ ತೆಗೆದುಕೊಳ್ಳಬೇಕು, ಹಾಗೇ ಕಾಂಗ್ರೆಸ್‌ನ ಮೇಲಿನ ನಿರ್ಬಂಧನೆ ಹಿಂದೆಕ್ಕೆ ತೆಗೆದು ಕೊಳ್ಳಬೇಕಾಗಿತ್ತು.

೧೯೩೯ ಆಗಸ್ಟ್ ೧೪ರಂದು, ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸದಸ್ಯರು ಮತ್ತು ಇತರರು ಚಿನ್ನದ ಗಣಿ ಪ್ರದೇಶದಲ್ಲಿ ಕಾಂಗ್ರೆಸ್ ಪ್ರಚಾರ ನಡೆಸಲು ಹೊರಟಿದ್ದರು. ಈ ಪ್ರದೇಶ ಪ್ರವೇಶಿಸಬಾರದೆಂದು ಅವರ ಮೇಲೆ ನಿಷೇದಾಜ್ಞೆ ಜಾರಿ ಮಾಡಲ್ಪಟ್ಟಿತು. ಈ ಆಜ್ಞೆಯಂತೆ ನಡೆದುಕೊಳ್ಳಲು ಅವರು ನಿರಾಕರಿಸಿದರು. ಎಲ್ಲರೂ ಬಂಧಿತರಾಗಿ ಶಿಕ್ಷಿಸಲ್ಪಟ್ಟರು. ಮೈಸೂರು ಕಾಂಗ್ರೆಸ್ ಕಮಿಟಿಯ ಎಲ್ಲ ಸದಸ್ಯರನ್ನೂ ಬಂಧಿಸಿದ್ದರಿಂದ ಕುಪಿತರಾದ ಜನ ಸತ್ಯಾಗ್ರಹ ಚಳುವಳಿ ಹೂಡಿದರು. ಈ ಪರಿಸ್ಥಿತಿಯನ್ನು ಎದುರಿಸಲು ಬ್ರಿಟಿಶ್ ಭಾರತದಲ್ಲಿ ಜಾರಿಗೆ ತಂದಿದ್ದ ಕ್ರಿಮಿನಲ್ ಲಾ ತಿದ್ದುಪಡಿ ಶಾಸನವನ್ನು ಮೈಸೂರಿನಲ್ಲಿ ಜಾರಿಗೆ ತರಲಾಯಿತು. ಗುಮಾನಿಯ ಮೇಲೆ ಯಾರನ್ನಾದರೂ ಬಂಧಿಸಿ ವಿಚಾರಣೆಗೆ ಒಳಪಡಿಸದೇ ಬಂಧನದಲ್ಲಿರಿಸಬಹುದಾದ ಅಧಿಕಾರ ಸರ್ಕಾರಕ್ಕೆ ಈ ಶಾಸನ ಕೊಟ್ಟಿತು. ಈ ಅಧಿಕಾರವನ್ನು ಬಳಸಿಕೊಂಡು ನೂರಾರು ಜನರನ್ನು ಬಂಧಿಸಲಾಯಿತು. ಇದರ ಪರಿಣಾಮವಾಗಿ ಕೆಲವೇ ನಗರಗಳಿಗೆ ಮೀಸಲಾಗಿದ್ದ ಹೋರಾಟ ಸರ್ವವ್ಯಾಪಕವಾಗಿ ಹರಡಿತು.[೪]

## ೬.೨. ಮಹಾತ್ಮ ಗಾಂಧಿ

ಮಹಾತ್ಮ ಗಾಂಧಿಯವರು ಹಳೆಯ ಮೈಸೂರು ರಾಜ್ಯಕ್ಕೆ ಆರು ಸಾರಿ ಭೇಟಿ ನೀಡಿದ್ದರು. ಮೊದಲ ಭೇಟಿ ೧೯೧೫ರಲ್ಲಿ, ದಕ್ಷಿಣ ಆಫ್ರಿಕದಿಂದ ಹಿಂತಿರುಗಿದ ಪ್ರಾರಂಭದಲ್ಲಿ. ಆಗ ಮಿರ್ಜಾ ಹುಜೂರ ಸೆಕ್ರಟರಿ ಆಗಿದ್ದರು. ಎರಡನೆಯ ಸಾರಿ ಶೌಕತ್ ಅಲಿ ಅವರೊಡನೆ ೧೯೨೦ರಲ್ಲಿ. ಮಿರ್ಜಾ ಮೈಸೂರು ಸಂಸ್ಥಾನದ ದಿವಾನರಾದ ಮೇಲೆ ಮೊದಲ ಸಲ ಭೇಟಿ ನೀಡಿದ್ದು ೧೯೨೭ರಲ್ಲಿ. ತಮ್ಮ ಆರೋಗ್ಯ ಸುಧಾರಿಸಿಕೊಳ್ಳಲು ಇಲ್ಲಿಗೆ ಬಂದು ನಂದಿಬೆಟ್ಟದ ಮೇಲೆ ಸ್ವಲ್ಪ ಕಾಲ ತಂಗಿದ್ದರು. ತಮ್ಮ ಪರಮಶತ್ರು ಗಾಂಧಿ ಎಂದು ಬ್ರಿಟಿಶ್ ಪ್ರಭುತ್ವ ಭಾವಿಸಿತ್ತು. ಗಾಂಧಿಯವರ ಪ್ರಭಾವವನ್ನು ಯಾವ ರೀತಿಯಲ್ಲಿ ತುಳಿದು ಹಾಕಬಹುದು ಎಂದು ಸದಾ ಹವಣಿಸುತ್ತಿತ್ತು. ಇಂಥ ವ್ಯಕ್ತಿಯನ್ನು ಬ್ರಿಟಿಶರ ಅಧೀನವಾದ ಮೈಸೂರಿಗೆ ಬರಮಾಡಿಕೊಳ್ಳು ವುದು ಅವರ ತೀವ್ರ ಅಸಮಾಧಾನಕ್ಕೆ ಪಾತ್ರವಾಗುವುದರಲ್ಲಿ ಎಳ್ಳಷ್ಟೂ ಸಂದೇಹವಿರಲಿಲ್ಲ. ಆದರೂ ಮೈಸೂರು ಸರ್ಕಾರ ಈ ಸಾಹಸ ಮಾಡಿತು. ಇಷ್ಟು ಮಾತ್ರವಲ್ಲದೆ ಅವರು ಮತ್ತು ಅವರ ಪರಿವಾರ ಉಳಿದುಕೊಳ್ಳಲು ಸರ್ಕಾರದ ಅತಿಥಿ ಗೃಹ ತೆರವು ಮಾಡಿಕೊಟ್ಟಿತು. ಇಬ್ಬರು ಪ್ರಮುಖ ವೈದ್ಯಾಧಿಕಾರಿಗಳು ದಿನವಹಿ ಅವರ ದೇಹಸ್ಥಿತಿ ನೋಡಿಕೊಳ್ಳುವಂತೆ ವ್ಯವಸ್ಥೆ ಮಾಡಿದರು. ಅವರಿಗೆ ಬೇಕಾದ ಸಕಲ ಸೌಲಭ್ಯಗಳನ್ನು ಒದಗಿಸಿಕೊಟ್ಟರು.

ನಂದಿಬೆಟ್ಟಕ್ಕೆ ಆಗ ಮೋಟಾರ್ ಮಾರ್ಗ ಇರಲಿಲ್ಲ. ಆದರೂ ಮಹಾತ್ಮರನ್ನು ಸಂದರ್ಶಿಸಲು ಕಡಿದಾದ ಮೆಟ್ಟಲುಗಳನ್ನು ಹತ್ತಿ ರಾಜಕೀಯ ಪ್ರಮುಖರು ಬರುತ್ತಲೇ ಇದ್ದರು. ಒಂದು ದಿನ ಮೂವರು ಮೈಸೂರು ರಾಜ್ಯದ ದಿವಾನರು, ಇಬ್ಬರು ನಿವೃತ್ತರು, ಸರ್.ವಿಶ್ವೇಶ್ವರಯ್ಯನವರು, ಇನ್ನೊಬ್ಬರು ಹಂಗಾಮಿ ದಿವಾನರಾಗಿದ್ದ ಮೀರ್ ಹಂಜಾಹುಸೇನ, ಮತ್ತೊಬ್ಬರು ಮಿರ್ಜಾ ಎಂ ಇಸ್ಮಾಯಿಲ್ ಏಕಕಾಲದಲ್ಲಿ ಮಹಾತ್ಮರನ್ನು ಸಂದರ್ಶಿಸಿದ್ದರು.

ತಾವು ಖಾದಿ ಧರಿಸಬಹುದೇ ಎಂಬ ಸಂಶಯ ಹಲವು ಸರ್ಕಾರಿ ನೌಕರರನ್ನು ಬಾಧಿಸುತ್ತಿತ್ತು. ಈ ವಿಷಯವನ್ನು ಮಹಾತ್ಮರಲ್ಲಿ ಪ್ರಸ್ತಾಪಿಸಲಾಗಿತ್ತು. ಸಂದೇಹ ನಿವಾರಣೆಗಾಗಿ ಮಹಾತ್ಮರೇ ಈ ಪ್ರಶ್ನೆಯನ್ನು ಮಿರ್ಜಾ ಬಂದಿದ್ದಾಗ ಕೇಳಿದರು. ಸರ್ಕಾರವೇ ಬದನವಾಳಿಯಲ್ಲಿ ಖಾದಿ ತಯಾರಿಕೆ ಕೈಗೊಂಡಿರುವಾಗ ಈ ಸಂದೇಹಕ್ಕೆ ಆಸ್ಪದ ಎಲ್ಲಿ ಎಂದರು ಮಿರ್ಜಾ. ಸರ್ಕಾರಗಳಲ್ಲಿ ಮೊಟ್ಟ ಮೊದಲ ಖಾದಿ ಉತ್ಪನ್ನ ಕೇಂದ್ರ ಸ್ಥಾಪಿಸಿದ ಕೀರ್ತಿ ಮೈಸೂರಿಗೆ ಲಭಿಸುತ್ತದೆ. ಇದು ಸ್ಥಾಪಿತವಾದುದು ಮಿರ್ಜಾ ದಿವಾನರಾಗಿದ್ದಾಗ. ಬ್ರಿಟಿಶ್‌ರ ಪ್ರಭುತ್ವದ ವಿರೋಧಿಗಳ ಸಮವಸ್ತ್ರ ಖಾದಿ ಎಂಬುದಾಗಿ ಬ್ರಿಟಿಶ್ ಸರ್ಕಾರ ಭಾವಿಸುತ್ತಿತ್ತು. ಆ ಸಂದರ್ಭದಲ್ಲಿ ಮಿರ್ಜಾ ಅವರಿಗೆ ಮಹಾತ್ಮರಲ್ಲಿ ಅಪರಿಮಿತ ಗೌರವ. ತಮ್ಮ ಭಕ್ತಿ ಗೌರವವನ್ನು ನಾನಾ ರೀತಿಯಲ್ಲಿ ಮಿರ್ಜಾ ಪ್ರದರ್ಶಿಸುತ್ತಲೇ ಬಂದರು. ಇದರಿಂದ ಬ್ರಿಟಿಶ್ ಪ್ರಭುತ್ವದ ಕ್ರೋಧಕ್ಕೆ ಅನೇಕ ಸಾರಿ ಅವರು ಗುರಿಯಾದರು. ೧೯೨೬-೨೭ರಲ್ಲಿ ನಡೆದ ಪ್ರಜಾಪ್ರತಿನಿಧಿ ಸಭೆಯಲ್ಲಿ ತಮಗೆ ಮಹಾತ್ಮರಲ್ಲಿರುವ

ಗೌರವವನ್ನು ಈ ವಾಕ್ಯಗಳಲ್ಲಿ ಹೇಳಿರುತ್ತಾರೆ, ''ದೇಶದ ಆತ್ಮಸ್ವರೂಪಿಯಾದ ಓರ್ವ ಮಹಾ ದೇಶಭಕ್ತ ಜನತೆಯ ಆಸೆ ಆಕಾಂಕ್ಷೆಗಳನ್ನು ಜ್ವಲಂತ ವಾಕ್ಯಗಳಿಂದ ಸಾರಿ ಹೇಳುತ್ತಿದ್ದಾರೆ. ದೇಶದ ಇಷ್ಟಾರ್ಥಗಳನ್ನು ಅರಿತು ತಿಳಿಸಲು ಇವರಿಗಿಂತ ಹೆಚ್ಚಿನ ಸಮರ್ಥರು ಬೇರೊಬ್ಬರಿರಲಾರರು' ಒಂದು ಕಡೆ ಇವರು, ಮತ್ತೊಂದು ಕಡೆ ಉದಾರ ಚರಿತರೂ ದೂರದೃಷ್ಟಿಯುಳ್ಳವರೂ ಆದ ಬ್ರಿಟಿಶ್ ಪ್ರಭುತ್ವದ ಪ್ರತಿನಿಧಿ ಲಾಡ್ ಇರ್ವಿನ್, ಭಾರತದ ಜನತೆಯ ಸಹೃದಯ ಬಾಂಧವರಾದ ಗಾಂಧೀಜಿ ಮತ್ತು ಪ್ರಭುತ್ವವನ್ನು ಪ್ರತಿನಿಧಿಸುವ ಲಾರ್ಡ ಇರ್ವಿನ್ ಇವರಿಬ್ಬರ ಪ್ರಯತ್ನದಿಂದ ಪ್ರಜೆ ಮತ್ತು ಪ್ರಭು ಇವರೀರ್ವರ ನಡುವಿನ ಕಂದರಕ್ಕೆ ಸೇತುವೆ ನಿರ್ಮಿಸುವುದು ಅಸಾಧ್ಯವಾಗದು.''

೧೯೩೩ರಲ್ಲಿ ಪ್ರಜಾಪ್ರತಿನಿಧಿ ಸಭೆಯಲ್ಲಿ ಮಾತನಾಡುತ್ತ ಇದೇ ತಮ್ಮ ಮನೋಗತವನ್ನು ಮಿರ್ಜಾ ಪುನರುಚ್ಚರಿಸಿದರು. ಈ ವೇಳೆಗೆ ರಾಜಕೀಯದಿಂದ ನಿರ್ಗಮಿಸುವ ತಮ್ಮ ಬಯಕೆಯನ್ನು ಮಹಾತ್ಮರು ಬಹಿರಂಗಪಡಿಸಿದ್ದರು. ''ಈ ಸನ್ನಿವೇಶದಲ್ಲಿ ಮಹಾತ್ಮ ಗಾಂಧೀಜಿಯವರು ನಿವೃತ್ತರಾಗಲು ಇದು ಸರಿಯಾದ ಕಾಲವಲ್ಲ. ದೇಶಕ್ಕೆ ಸರಿಯಾದ ಮಾರ್ಗದರ್ಶನ ಮಾಡಬಲ್ಲ ದೇಶಭಕ್ತನ ಅವಶ್ಯಕತೆ ಎಂದಿಗಿಂತ ಈಗ ಹೆಚ್ಚು ಅಗತ್ಯ. ಈ ನಾಡಿನಲ್ಲಿ ಮಹಾತ್ಮ ಗಾಂಧೀಜಿ ಅಮೋಘ ಸ್ಥಾನಗಳಿಸಿಕೊಂಡಿದ್ದಾರೆ. ಇವರು ಶಾಂತಿ ಪ್ರಿಯರೂ ಉಜ್ವಲ ದೇಶಭಕ್ತರೂ, ದೂರದೃಷ್ಟಿಯ ಪ್ರಜ್ಞಾವಂತ ರಾಜಕೀಯ ಪಟುಗಳೂ ಆಗಿರುತ್ತಾರೆ. ದೇಶದಲ್ಲಿರುವ ನಾನಾ ಗುಂಪುಗಳನ್ನು ಒಂದುಗೂಡಿಸಿಕೊಂಡು ಸ್ವಾಯತ್ತತೆಯತ್ತ ಇನ್ನೊಂದು ಅಡಿಯಿಡಲು ಇವರಿಗಿಂತ ಸಮರ್ಥರು ಬೇರೊಬ್ಬರಿಲ್ಲ. ಭಾರತ ಮತ್ತು ಬ್ರಿಟನ್ ನಡುವೆ ಮಧುರ ಬಾಂಧವ್ಯ ಮೂಡಿಸಬಲ್ಲ ಶಕ್ತಿ ಬೇರೆ ಯಾರಿಗೂ ಇಲ್ಲ. ಈತ ಭಾರತದ ಗೆಳೆಯ. ಇಂಗ್ಲೆಂಡಿನ ಸನ್ಮಿತ್ರ. ಈ ಸನ್ನಿವೇಶದಲ್ಲಿ ಗಾಂಧೀಜಿ ನಿವೃತ್ತರಾದರೆ, ಅವರ ಸ್ಥಾನವನ್ನು ಅನರ್ಹರೂ, ಹಗಲು ಕನಸುಕಾಣುತ್ತ ಸ್ವತೇವ ತಮ್ಮನ್ನೂ ಮತ್ತು ಜನತೆಯನ್ನು ಅಡ್ಡದಾರಿಗೆ ಎಳೆಯುವ ರಾಜಕೀಯ ಚಳುವಳಿಗಾರರೂ ಆಕ್ರಮಿಸಿಕೊಳ್ಳಬಹುದು.'' ಈ ದಿಟ್ಟ ನುಡಿಗಳನ್ನಾಡುವ ಸಾಹಸ ಮಿರ್ಜಾ ಮಾಡಿದರು. ದ್ವಿತೀಯ ಚಕ್ರ ಗೋಷ್ಠಿಯಲ್ಲಿ ಅತ್ಯಂತ ಪ್ರಭಾವಶಾಲಿಯಾದ ಸನ್ಮಿತ್ರನನ್ನು ತಾನು ಗಾಂಧೀಯವರಲ್ಲಿ ಪಡೆದುಕೊಂಡುದಾಗಿ ಮಿರ್ಜಾ ಹೇಳಿದರು.[೫] ಒಮ್ಮೆ ಮೈಸೂರು ಪ್ರಜಾಪ್ರತಿನಿಧಿ ಸಭೆಯನ್ನು ಉದ್ದೇಶಿಸಿ ಮಾತನಾಡುತ್ತಾ ಮಿರ್ಜಾ ಗಾಂಧೀಜಿಯನ್ನು ಕಾಂಗ್ರೆಸ್ಸಿನ ಸ್ವದೇಶಿ ತತ್ವವನ್ನೂ ಮನಸಾರೆ ಹೊಗಳಿದರು. ರಾಜ್ಯದಲ್ಲಿ ಕಾಂಗ್ರೆಸ್ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸದೇ ತಾನೇ ರಾಜ್ಯದ ಎಲ್ಲ ಕಾಂಗ್ರೆಸ್ಸಿಗರಿಗಿಂತಲೂ ಉತ್ತಮ ಕಾಂಗ್ರೆಸ್ಸಿಗನೆಂದು ಅವರು ಬೀಗಿದ್ದುಂಟು. ಗಾಂಧೀಜಿಯ ಬಗ್ಗೆ ಹೇಳುತ್ತಾ ''ಆತ ಒಬ್ಬ ಮಹಾನ್ ದೇಶ ಭಕ್ತ, ವಿಶಿಷ್ಟ ದುರಾಲೋಚನೆಯಿರುವ ರಾಜ್ಯದುರಂಧರ, ಆತನಲ್ಲಿ ಸರ್ಕಾರ ಒಬ್ಬ ಮಹಾನ್ ಮಿತ್ರನನ್ನು ಹೊಂದಿದೆ'' ಎಂದು ಮಿರ್ಜಾ ಹೊಗಳಿದ್ದರು. ಇದು ಬ್ರಿಟಿಶ್ ವೈಸರಾಯಿ ಲಾರ್ಡ್ ವೆಲ್ಲಿಂಗ್ಟನ್ ಅವರನ್ನು ತುಂಬ ಕೆರಳಿಸಿತು. ವೈಸರಾಯರು ತಮ್ಮ ಅಸಂತೋಷ ವ್ಯಕ್ತಪಡಿಸಿ ಮಹಾರಾಜರಿಗೆ ನೇರವಾಗಿ ಸ್ವಹಸ್ತದಲ್ಲಿ ಪತ್ರ ಬರೆದು ಕಳುಹಿಸಿದರು.[೬]

ಈ ಸಂಕಟ ಸನ್ನಿವೇಶದಲ್ಲಿ ಏನು ಮಾಡೋಣ ಎಂದು ಮಹಾರಾಜರ ಆಪ್ತಕಾರ್ಯದರ್ಶಿ ಮಿರ್ಜಾ ಅವರಿಂದ ಸಲಹೆ ಬಯಸಿದರು. ಮಿರ್ಜಾ ಅವರ ಸಲಹೆಯಂತೆ ಮಹಾರಾಜರು ವೈಸರಾಯರಿಗೆ ಪತ್ರ ಬರೆದರು. ಮಹಾತ್ಮ ಗಾಂಧೀಜಿ ರಾಜ ಅತಿಥಿಯಾಗಿ ಇಲ್ಲಿಗೆ ಬರುತಿಲ್ಲ. ಮಹಾಜನರ ಆಹ್ವಾನ ಸ್ವೀಕರಿಸಿ ಅವರು ಮೈಸೂರಿಗೆ ಬರುತ್ತಿದ್ದಾರೆ. ಗಣ್ಯ ಅತಿಥಿಗಳಿಗೆ, ಪದ್ಧತಿಯಂತೆ ಕುಮಾರ ಕೃಪ ಅತಿಥಿ ಭವನವನ್ನು ಅವರಿಗಾಗಿ ಬಿಟ್ಟುಕೊಡಲಾಗಿದೆ. ಆದರೆ ಇದು ವೈಸರಾಯರಿಗೆ ಅಪ್ರಿಯವಾಗಿದ್ದರೆ ಮಹಾತ್ಮರಿಗೆ ನೀಡಿದ್ದ ಆಹ್ವಾನವನ್ನು ಹಿಂತೆಗೆದುಕೊಳ್ಳುವಂತೆ ತನ್ನ ದಿವಾನರಿಗೆ ತಿಳಿಸುವುದಾಗಿ ಮಹಾರಾಜರು ವೈಸರಾಯರಿಗೆ ಬರೆದರು. ಮಹಾತ್ಮಗಾಂಧೀಜಿ ಚಕ್ರಗೋಷ್ಠಿಯಿಂದ ಹಿಂತಿರುಗುತ್ತಲೇ ಜನವರಿ ೪, ೧೯೩೨ರಲ್ಲಿ ವೈಸರಾಯಿ ಲಾರ್ಡ್ ವೆಲ್ಲಿಂಗ್ಟನ್ ಅವರ ಆಜ್ಞೆಯಂತೆ ಬಂಧಿಸಲ್ಪಟ್ಟು, ಯರವಾಡ ತುರಂಗ ಸೇರಿದರು. ತುರಂಗದಲ್ಲಿ ಇದ್ದಾಗಲೇ ಸೆಪ್ಟೆಂಬರ್ ೨೦ರಲ್ಲಿ ಹರಿಜನರಿಗೆ ಪ್ರತ್ಯೇಕ ಚುನಾವಣೆ ನಡೆಸುವುದನ್ನು ವಿರೋಧಿಸಿ ೨೧ ದಿನಗಳ ಘೋರ ನಿರಶನ ವ್ರತ ಕೈಗೊಂಡರು. ಮತ್ತು ಮೇ ೮, ೧೯೩೩ರಲ್ಲಿ ಆತ್ಮಶುದ್ಧಿಗಾಗಿ ಪ್ರಾಯಶ್ಚಿತದ ಪ್ರಾಯೋಪವಾಸ ನಡೆಸಿದರು.

ಈ ಸಂದರ್ಭದಲ್ಲಿ ಮಿರ್ಜಾ ಮಹಾತ್ಮರಿಗೆ ಬರೆದ ಪತ್ರ ಅವರಿಗೆ ಗಾಂಧಿಯವರಲ್ಲಿದ್ದ ಅಮಿತ ವಿಶ್ವಾಸವನ್ನು ಹೊರಸೂಸುತ್ತದೆ.[೮] ''ಈ ಜಗತ್ತಿನಲ್ಲಿ ನಿಮಗಿಂತ ಅಧಿಕ ಪ್ರೀತಿಗೆ ಪಾತ್ರರಾದವರು ಬೇರೊಬ್ಬರಿಲ್ಲ. ನನಗೆ ಅಂತಃಕರಣಪೂರ್ವಕ ನಿಮ್ಮಲ್ಲಿ ಅಷ್ಟೇ ಗೌರವವಿದೆ. ನಿಮ್ಮನ್ನು ಕಾಣಬೇಕು, ಮಾತನಾಡಿಸಬೇಕು ಎಂದು ನನ್ನ ಮನಸ್ಸು ಹಾತೊರೆಯುತ್ತದೆ. ಆದರೆ ನೀವು ನಿರಾಹಾರಿಗಳಾಗಿರುವಾಗ ನಿಮ್ಮನ್ನು ನೋಡಲು ನನ್ನಿಂದ ಸಾಧ್ಯವಾಗದು. ನನ್ನ ಹೃದಯ ಒಡೆದುಹೋಯಿತು. ನಿಮ್ಮ ಭಾವಚಿತ್ರಗಳು ನನ್ನ ಎರಡು ಕೊಠಡಿಗಳಲ್ಲೂ ಇವೆ. ಈ ಭಾವಚಿತ್ರಗಳನ್ನು ನೋಡುವುದರಲ್ಲಿಯೇ ನಾನು ಸಮಾಧಾನಪಟ್ಟು ಕೊಳ್ಳಬೇಕಾಗಿದೆ. ಆದರೆ ಇಷ್ಟರಲ್ಲೇ ನೀವು ಬೆಂಗಳೂರಿಗೆ ಬರುವಿರಿ. ನಿಮ್ಮನ್ನು ಭೇಟಿಯಾಗುವ ಸದಾವಕಾಶ ಪ್ರಾಪ್ತವಾದೀತು ಎಂದು ನನ್ನ ಮನಸ್ಸು ಹೇಳುತ್ತಿದೆ. ಪಟೇಲ್ ಮತ್ತು ಸಿ.ರಾಜಗೋಪಾಲಾಚಾರ್ಯರು ತುಂಬಾ ಕಷ್ಟ ಕಾಲಗಳಲ್ಲಿ ನನ್ನ ನೆರವಿಗೆ ಬಂದು ಉಪಕರಿಸಿರುತ್ತಾರೆ.'' ಎಂದು ಬರೆದರು. ಸರ್.ಮಿರ್ಜಾ ದಕ್ಷ ಆಡಳಿತಗಾರ ಎಂಬ ಖ್ಯಾತಿಗಳಿಸಿದ್ದರು. ಮಾದರಿ ಸಂಸ್ಥಾನ ಮೈಸೂರು ಆಗಿತ್ತು. ಇತರ ಸಂಸ್ಥಾನಗಳೊಡನೆ ಹೋಲಿಸಿ ನೋಡಿದರೆ, ಎಲ್ಲ ದೃಷ್ಟಿಗಳಿಂದಲೂ ಮೈಸೂರು ಮುಂದುವರೆದಿತ್ತು. ಹಿಂದೂ-ಮುಸ್ಲಿಂ ಸೌಹಾರ್ದತೆಗಾಗಿ ಗಾಂಧೀಜಿ ಬಹಳ ಶ್ರಮಿಸುತ್ತಿದ್ದರು. ಇದಕ್ಕೆ ತದ್ವಿರುದ್ಧ ಮಹಮ್ಮದ್‌ಲಿ ಜಿನ್ನಾ ಅವರು ಮುಸ್ಲಿಮರು ಪ್ರತ್ಯೇಕ ಜನಾಂಗ, ಭಾರತವನ್ನು ಇಬ್ಭಾಗ ಮಾಡಿ ಪಾಕಿಸ್ತಾನ ಸ್ಥಾಪಿಸಬೇಕೆಂದು ಹವಣಿಸುತ್ತಿದ್ದರು. ಭಾರತ ಸ್ವತಂತ್ರವಾಗಲು ಎಲ್ಲ ಶಕ್ತಿಗಳನ್ನೂ ಒಂದುಗೂಡಿಸಿ ಕಡೆಯ ಹೋರಾಟ ನಡೆಸಲು ಗಾಂಧೀಜಿ ದೇಶವನ್ನು ಅಣಿ ಮಾಡುತ್ತಿದ್ದರು. ಬೇರೆ ಬೇರೆ ಚಳವಳಿಗಳಲ್ಲಿ ಶಕ್ತಿ ಪೋಲು ಮಾಡಲಾಗದು, ಇದು ಅಹಿಂಸೆಯ ಮಾರ್ಗದರ್ಶಕನ ಹೋರಾಟದ ನೀತಿಯಾಗಿತ್ತು. ರಾಷ್ಟ್ರವಾದಿ

ಮುಸಲ್ಮಾನರ ಸಂಖ್ಯೆ ಅಲ್ಪವಾಗಿತ್ತು. ಇಂಥ ಪರಿಸ್ಥಿತಿಯಲ್ಲಿ ಮಿರ್ಜಾ ಅವರಂಥ ರಾಷ್ಟ್ರೀಯವಾದಿ ಮುಸಲ್ಮಾನರ ಸ್ನೇಹ ಬಾಂಧವ್ಯ ಕಳೆದುಕೊಳ್ಳಲು ಅವರು ಸಿದ್ಧರಿರಲಿಲ್ಲ. ಪಾರತಂತ್ರ್ಯದಿಂದ ಭಾರತ ಸ್ವತಂತ್ರವಾದ ತರುವಾಯ ಇತರ ಸಮಸ್ಯೆಗಳಿಗೆ ಗಮನ ಕೊಡಬಹುದು. ಯಾರ ಛತ್ರಛಾಯೆಯಲ್ಲಿ ಮಹಾರಾಜರು ಸ್ವಇಚ್ಛೆಯಿಂದ ವರ್ತಿಸುತ್ತಿರುವರೊ ಆ ಆಶ್ರಯವೇ ಕಳಚಿ ಬಿದ್ದ ಮೇಲೆ ದೇಶಿ ಸಂಸ್ಥಾನಗಳ ಸಮಸ್ಯೆ ಬಗೆಹರಿಸುವುದು ಏನೂ ಕಷ್ಟವಾಗದು. ಇದು ಮಹಾತ್ಮರ ಮನದೋಟವಾಗಿತ್ತು. ಈ ಹಿನ್ನೆಲೆಯಲ್ಲಿ ಮೈಸೂರಿನ ಚಳುವಳಿಗೆ ಮಹಾತ್ಮರ ಆಶೀರ್ವಾದ ಏಕೆ ದುರ್ಲಭವಾಗಿತ್ತು ಎಂದು ಗ್ರಹಿಸುವುದು ಅಗತ್ಯ. ಮಹಾತ್ಮರ ನೈತಿಕ ಬೆಂಬಲವೂ ಲಭಿಸದೆ ಮೈಸೂರಿನಲ್ಲಿ ಹೋರಾಟ ನಡೆಸುತ್ತಿದ್ದವರು ಬಹಳ ಬಳಲಬೇಕಾಯಿತು ಎಂಬುದೂ ನಿಜ.

ಮಿರ್ಜಾ ಜಯಪುರದ ಪ್ರಧಾನ ಮಂತ್ರಿಯಾದ ಕೆಲವೇ ದಿನಗಳಲ್ಲಿ ಮಹಾತ್ಮರು ಇವರಿಗೆ ಪತ್ರ ಬರೆದರು. ಪ್ರಧಾನಿಯಾದುದಕ್ಕೆ ನಿಮ್ಮನ್ನು ವಂದಿಸಲೋ, ದುಃಖ ವ್ಯಕ್ತಪಡಿಸಲೋ ಎಂಬ ಸಂದಿಗ್ಧ ಸ್ಥಿತಿಯಲ್ಲಿ ತಾವಿರುವುದಾಗಿಯೂ, ವಿಶಾಲ ಕ್ಷೇತ್ರದಲ್ಲಿ ಮತೀಯ ಸಮಸ್ಯೆ ಪರಿಹರಿಸಲು ಮಿರ್ಜಾ ಶ್ರಮಿಸುವರೆಂದು ತಾವು ನಿರೀಕ್ಷಿಸಿದ್ದುದಾಗಿಯೂ ಮಹಾತ್ಮರು ತಿಳಿಸಿದರು. ಅವರ ಅತೃಪ್ತಿ ಇವರಲ್ಲಿ ಸ್ಪಷ್ಟವಾಗಿದೆ. ಮಿರ್ಜಾ ಹೈದರಾಬಾದಿನ ಪ್ರಧಾನಿಯಾದಾಗ ರಜಾಕಾರರ ಪುಂಡು ಅಡಗಿಸಿ, ಅಲ್ಲಿನ ಪ್ರಜಾಪ್ರಮುಖರಿಗೆ ಸಮಾಧಾನವಾಗುವಂತೆ ರಾಜಕೀಯ ಸುಧಾರಣೆಗಳನ್ನು ರೂಪಿಸುವರೆಂದು ಅವರು ಆಶಿಸಿದ್ದರು. ಆದರೆ ಇದೂ ಕೂಡ ಕೈಗೂಡಲಿಲ್ಲ. ಪಾಕಿಸ್ತಾನದ ರಾಜಧಾನಿಯಾಗಿದ್ದ ಕರಾಚಿಗೆ ಹೋದಾಗ ಅಲ್ಲಿ ಮಹಾತ್ಮರ ಪ್ರತಿಮೆ ಕಾಣದೆ ಮಿರ್ಜಾ ನೊಂದುಕೊಂಡರು. ಭಾರತ ಇಬ್ಭಾಗವಾಗುವ ಮೊದಲು ಮಹಾತ್ಮರ ಪ್ರತಿಮೆ ಇಲ್ಲಿ ಸ್ಥಾಪಿತವಾಗಿತ್ತು. ಮುಸಲ್ಮಾನರು ಅವರಿಗೆ ಚಿರಂತರ ಋಣಿಯಾಗಿರಬೇಕು. ದೂರದೃಷ್ಟಿಯಿಲ್ಲ ಅಲ್ಪಮತಿಗಳ ಕಾರ್ಯವಿದು ಎಂದು ದುಃಖಪಟ್ಟರು.

ಕೃಷ್ಣರಾಜ ಒಡೆಯರವರ ಅಕಾಲ ನಿಧನ ಹಾಗೂ ಮಹಾತ್ಮ ಗಾಂಧೀಜಿಯವರ ಕೊಲೆ, ತನ್ನ ಜೀವನದಲ್ಲಿ ಅತ್ಯಂತ ದುಃಖಕರವಾದ ಎರಡು ಘಟನೆಗಳೆಂದು ಮಿರ್ಜಾ ಹೇಳಿಕೊಂಡಿರುತ್ತಾರೆ. ಗಾಂಧೀಜಿ ಅಪಮೃತ್ಯುವಿಗೆ ತುತ್ತಾಗುವರೆಂದು ಎಸ್.ಶ್ರೀನಿವಾಸ ಶಾಸ್ತ್ರಿಗಳು ಬಹುಕಾಲಕ್ಕೆ ಹಿಂದೆಯೇ ಭವಿಷ್ಯ ನುಡಿದಿದ್ದರೆಂದು ಮಿರ್ಜಾ ತಮ್ಮ ಆತ್ಮಕಥನದಲ್ಲಿ ಬರೆದಿರುತ್ತಾರೆ.[೯]

## ೬.೩. ಮಹಮ್ಮದ್ ಅಲಿ ಜಿನ್ನಾ

ಮುಸ್ಲಿಂ ಲೀಗಿನ ಅಧ್ಯಕ್ಷರಾದ ಮಹಮ್ಮದ್ ಅಲಿ ಜಿನ್ನ ಮತ್ತು ಮಿರ್ಜಾ ಇಸ್ಮಾಯಿಲರ ಸಂಬಂಧ ಮೊದಲು ಅಂದರೆ ಹೈದರಾಬಾದಿನ ದಿವಾನರಾಗುವ ಪೂರ್ವದಲ್ಲಿ ಉತ್ತಮ ರೀತಿಯಲ್ಲಿತ್ತು. ಜಿನ್ನಾರವರು ಮುಸ್ಲಿಂ ಲೀಗಿನ ಅಧ್ಯಕ್ಷರಾಗುವ ಮೊದಲು ಭಾರತ ದೇಶದ ಒಬ್ಬ ಮುಸ್ಲಿಂ ನಾಯಕರಾಗಿದ್ದರು. ಹಾಗೇ

ಕಾಂಗ್ರೆಸಿನ ಬಗ್ಗೆ ಕೂಡ ಉತ್ತಮವಾದ ಅಭಿಪ್ರಾಯವಿತ್ತು. ಯಾವಾಗ ಬ್ರಿಟಿಶರು ಒಡೆದಾಳುವ ನೀತಿಯನ್ನು ಜಾರಿಗೆ ತಂದರೋ ಆವಾಗಲೇ ಜಿನ್ನಾರವರಿಗೆ ಮುಸ್ಲಿಂ ಸಮುದಾಯದ ಬಗ್ಗೆ ಅತಿಯಾದ ಪ್ರೀತಿ ಹುಟ್ಟಿಕೊಂಡು ಕೊನೆಗೆ ಹಿಂದೂ ಮತ್ತು ಮುಸ್ಲಿಂ ನಡುವೆ ದೇಶ ಒಡೆಯುವ ಮಟ್ಟಕ್ಕೆ ಹೋಯಿತು. ಇಂತಹ ಸಂದರ್ಭದಲ್ಲಿ ಮಿರ್ಜಾರವರಿಗೆ ಹೈದರಾಬಾದ್‌ನ ನಿಜಾಮ ಹೈದರಾಬಾದಿನ ಸಂಸ್ಥಾನದ ಮಹತ್ವದ ಹುದ್ದೆಯಾದ ದಿವಾನ ಹುದ್ದೆಯನ್ನು ಸ್ವೀಕರಿಸಬೇಕೆಂದು ಪತ್ರ ಮುಖಾಂತರ ಕೇಳಿಕೊಂಡಿದ್ದರು. ಅದಕ್ಕೆ ಮಿರ್ಜಾ ಅವರು ಮೊದಮೊದಲು ಈ ಪ್ರಸ್ತಾಪಕ್ಕೆ ಒಪ್ಪದೆ ನನಗೆ ವಿಶ್ರಾಂತಿ ಬೇಕಾಗಿದೆ ದಯವಿಟ್ಟು ನಿಮ್ಮ ಪ್ರಸ್ತಾಪಕ್ಕೆ ನನ್ನ ಉತ್ತರ ಮೌನವೆ ಆಗಿದೆ ಎಂದು ನಿಜಾಮರಿಗೆ ಪತ್ರ ಬರೆದರು. ಆದರೂ ಕೂಡ ಮತ್ತೆ ತಮ್ಮ ಪ್ರಯತ್ನ ಮುಂದುವರೆಸಿ ಮತ್ತೊಂದು ಪತ್ರ ಬರೆದು ನೀವು ಆಡಳಿತದಲ್ಲಿ ತುಂಬಾ ನಿಪುಣರು, ಈಗಾಗಲೇ ಮೈಸೂರು ಸಂಸ್ಥಾನವನ್ನು ಅಭಿವೃದ್ಧಿಯತ್ತ ತೆಗೆದುಕೊಂಡು ಹೋಗಿದ್ದೀರಿ ಅದಕ್ಕಾಗಿ ನಿಮ್ಮ ಸೇವೆ ನಮ್ಮಂಥ ದೊಡ್ಡ ಸಂಸ್ಥಾನಕ್ಕೆ ಅವಶ್ಯಕವಾಗಿದೆ ಎಂದು ಪತ್ರದಲ್ಲಿ ವಿವರಿಸಿದರು. ಕೊನೆಗೆ ಮಿರ್ಜಾ ಅವರು ನಿಜಾಮನ ಮನವಿಗೆ ಸಮ್ಮತಿಸಿ ಒಪ್ಪಿಕೊಂಡರು. ಈ ವಿಷಯ ತಿಳಿದು ನಿಜಾಮ ಸಂತೋಷದಿಂದ ಆಹ್ವಾನ ನೀಡಿದರು. ಮಿರ್ಜಾರಿಗೆ ಯಾವಾಗ ಪ್ರಧಾನಮಂತ್ರಿ(ದಿವಾನ) ಹುದ್ದೆಗೆ ಆಹ್ವಾನ ನೀಡಿದರೋ ಆಗಲೇ ಜಿನ್ನಾರವರ ಮತ್ತು ಮಿರ್ಜಾ ಸಂಬಂಧಕ್ಕೆ ಧಕ್ಕೆ ಬಂದಿತ್ತು. ಜಿನ್ನಾರವರು ಈ ವಿಷಯವನ್ನು ಕುರಿತು ನೇರವಾಗಿ ಹೈದರಾಬಾದಿನ ಸಂಸ್ಥಾನದ ನಿಜಾಮ ಉರ ಉಸಮ್ಮಾನ ಅಲಿಖಾನರಿಗೆ ಒಂದು ಪತ್ರ ಬರೆದು ವಿನಂತಿ ಮಾಡಿಕೊಳ್ಳುತ್ತಾ, ದಯವಿಟ್ಟು ನಿಜಾಮ ಸಾಹೇಬರೆ ಮಿರ್ಜಾ ಅವರನ್ನು ಹೈದರಾಬಾದಿನ ಸಂಸ್ಥಾನಕ್ಕೆ ದಿವಾನರಾಗಿ ನೇಮಕ ಮಾಡಬೇಡಿ. ಏಕೆಂದರೆ ಮಿರ್ಜಾ ಈಗಾಗಲೇ ಹಿಂದೂ ಸಂಸ್ಥಾನದ ಅಧೀನದಲ್ಲಿ ಕೆಲಸ ಮಾಡಿ ಬಂದಿದ್ದಾರೆ ಹಾಗೂ ಕಾಂಗ್ರೆಸಿನ ಜೊತೆ ಸಂಬಂಧ ಹೊಂದಿದ್ದಾರೆ. ಅದಕ್ಕಾಗಿ ನೇಮಕ ಮಾಡಬೇಡಿ ಎಂದು ವಿನಂತಿಸಿಕೊಂಡರು. ನಿಜಾಮರು ಈ ಪತ್ರಕ್ಕೆ ಯಾವುದೇ ಉತ್ತರ ಬರೆಯಲಿಲ್ಲ.

ಮಿರ್ಜಾ ಎಂ ಇಸ್ಮಾಯಿಲ್‌ರಿಗೆ ಜಿನ್ನಾರವರು ಪತ್ರ ಬರೆದ ವಿಷಯ ತಿಳಿಯಿತು. ಜಿನ್ನಾರವರು ಹೈದರಾಬಾದ್ ಸಂಸ್ಥಾನದ ದಿವಾನರಾಗಿ ಮಿರ್ಜಾ ಅಧಿಕಾರಕ್ಕೆ ಬರುವುದಕ್ಕೆ ಪೂರ್ವದಲ್ಲಿ ಒಂದು ಪತ್ರ ಬರೆದು ಮುಸ್ಲಿಂ ಲೀಗಿನ ಸದಸ್ಯರಾಗುವುದಕ್ಕೆ ಮಿರ್ಜಾರವರಿಗೆ ಕೇಳಿಕೊಂಡಿದ್ದರು. ಈ ಪ್ರಸ್ತಾಪವನ್ನು ಮಿರ್ಜಾ ಎಂ ಇಸ್ಮಾಯಿಲ್ ರು ತಳ್ಳಿ ಹಾಕಿದರು. ಏಕೆಂದರೆ ಈ ಸಂದರ್ಭದಲ್ಲಿ ತನ್ನ ಬಾಲ್ಯ ಗೆಳೆಯ ಹಾಗೂ ಮೈಸೂರಿನ ಒಡೆಯರಾದ ನಾಲ್ವಡಿ ಕೃಷ್ಣರಾಜ ಒಡೆಯರ ಹತ್ತಿರ ದಿವಾನರಾಗಿ ಕೆಲಸದಲ್ಲಿ ಇದ್ದರು ಮತ್ತು ಕೃಷ್ಣರಾಜ ಒಡೆಯರ ಪ್ರೀತಿಗೆ ಪಾತ್ರರಾಗಿದ್ದರು. ಮುಸ್ಲಿಂ ಲೀಗಿನ ಸದಸ್ಯರಾಗುವುದಿಲ್ಲ ಎಂದ ಮೇಲೆ ಒಂದು ಮುಸ್ಲಿಂ ಸಂಸ್ಥಾನದ ಪ್ರಧಾನ ಮಂತ್ರಿಯಾಗುವ ಅರ್ಹತೆಯೂ ಮಿರ್ಜಾ ಅವರಿಗೆ ಇಲ್ಲ ಎಂಬುದಾಗಿ ಜಿನ್ನಾರವರು ನಿಜಾಮರಿಗೆ ಪತ್ರ ಬರೆದರು. ಈ ಪತ್ರ ಬರೆದ ವಿಷಯಕ್ಕೆ ಯಾವುದೇ ರೀತಿಯ ಪ್ರತಿಕ್ರಿಯೇ ನೀಡಲು ಇಚ್ಛೆ ಪಡಲಿಲ್ಲ. ಆದರೂ ಒಂದೇ ಒಂದು ಮಾತು ಹೇಳಿದರು. ''ಮುಸ್ಲಿಂ

ಲೀಗ್ ಮಹಮ್ಮದಿಯರನ್ನು ಪ್ರತಿನಿಧಿಸುವ ಏಕ ಮಾತ್ರ ಸಂಸ್ಥೆ. ಆ ಸಂಸ್ಥೆಯ ಅಧ್ಯಕ್ಷರಾಗಿ ಸರ್ವಾನುಮತದಿಂದ ಜಿನ್ನಾ ಆಯ್ಕೆಯಾಗಿದ್ದಾರೆ ಹಾಗೂ ಮುಸ್ಲಿಂ ಪರ ಅಧಿಕಾರ ಚಲಾಯಿಸುವವರು ಕೂಡ ಅವರೊಬ್ಬರೆ ಆಗಿರುತ್ತಾರೆ ಎಂದು ಹೇಳಿದರು.'' ಇದಕ್ಕೆ ಪ್ರತಿಕ್ರಿಯೆಯಾಗಿ ಜಿನ್ನಾರವರು ಮಿರ್ಜಾ ಅವರಿಗೆ ಉತ್ತರಿಸುತ್ತಾ ''ಮುಸ್ಲಿಂ ಲೀಗ್ ಮುಸಲ್ಮಾನರನ್ನು ಪ್ರತಿನಿಧಿಸುವ ಏಕ ಮಾತ್ರ ಸಂಸ್ಥೆ. ನಾನೂ ಲೀಗಿನ ಅಧ್ಯಕ್ಷನಾಗಿ ಮಾತನಾಡಬಲ್ಲ ಏಕಮಾತ್ರ ವ್ಯಕ್ತಿ ಎಂದು ಒಪ್ಪಿಕೊಂಡ ಮೇಲೂ ನೀವು ಅತಿಮಾನುಷ ವ್ಯಕ್ತಿಯಂತೆ ಲೀಗಿನಿಂದ ಹೊರನಿಂತು ಕೆಲಸ ಮಾಡುವುದು ಉಚಿತವಲ್ಲ. ಇದರಿಂದ ಮುಸ್ಲಿಂ ಲೀಗಿಗೆ ಮಾತ್ರವಲ್ಲ ಇಡೀ ಭಾರತಕ್ಕೆ ದ್ರೋಹ ಬಗೆದಂತೆ ಆದೀತು'' ಎಂದು ಎಚ್ಚರಿಸಿದರು. ಆವಾಗ ಮಿರ್ಜಾ ಅವರು ''ನನ್ನ ಸ್ವಜಾತಿಯರ ಹಿತಾಸಕ್ತಿಗಳನ್ನು ಪೂರ್ಣವಾಗಿ ಗಮನದಲ್ಲಿ ಇಟ್ಟುಕೊಂಡಿದ್ದೇನೆ, ಹಾಗೇ ಇತರ ಜಾತಿಯರ ಬಗ್ಗೆ ಕೂಡ ಸೌಹಾರ್ದತೆ ಸ್ಥಾಪಿಸಲು ಮನಪೂರ್ವಕವಾಗಿ ಪ್ರಯತ್ನಿಸುವೆ. ನನ್ನ ಗುರಿ ಮತ್ತು ಧ್ಯೇಯಗಳಲ್ಲಿ ಅಧಿಕ ಭಿನ್ನತೆ ಇರಲಾರದು ಎಂದು ತಿಳಿಯುತ್ತೇನೆ. ಆದರೆ ನನ್ನ ಗುರಿ ಸಾಧನೆಗೆ ಯಾವುದೇ ಕ್ರಮದಲ್ಲಿ ಹೊಂದಾಣಿಕೆ ಇಲ್ಲದಿರಬಹುದು'' ಎಂದು ದಿಟ್ಟತನದ ಉತ್ತರ ಮಿರ್ಜಾ ಕೊಟ್ಟರು. ಮುಸ್ಲಿಂ ಲೀಗ್ ಹಿಂದೂ ವಿರೋಧಿ ಸಂಸ್ಥೆ ಎಂದು ಅನುಭವಿಗಳೂ ಹೊಣೆಗಾರಿಕೆ ಅರಿತವರೂ ಆದ ಮಿರ್ಜಾ ಹೇಳಿರುವುದು ತನಗೆ ಅತೀವ ನೋವುಂಟಾಗಿದೆ ಎಂದು ಜಿನ್ನಾ ಪ್ರತಿಭಟನೆ ವ್ಯಕ್ತಪಡಿಸಿದರು.[೧೦]

೧೯೪೬ರಲ್ಲಿ ಹೈದರಾಬಾದ್ ಸಂಸ್ಥಾನದ ಪ್ರಧಾನಮಂತ್ರಿ(ದಿವಾನ್) ಹುದ್ದೆಗೆ ಜಿನ್ನಾ ವಿರೋಧ ವ್ಯಕ್ತಪಡಿಸಿದರು. ಏಕೆಂದರೆ ಒಬ್ಬ ಮುಸ್ಲಿಂ ವಿರೋಧಿ ಅತಿ ದೊಡ್ಡ ಸಂಸ್ಥಾನದ ದಿವಾನ ಆಗುವುದು ಬೇಡ ಎಂಬ ವಾದ ಜಿನ್ನ ಅವರದು. ನಿಜಾಮರಿಗೆ ಪತ್ರ ಬರೆದರು, ಒಪ್ಪದಿದ್ದಾಗ ನೇರವಾಗಿ ಜಿನ್ನಾ ನಿಜಾಮರನ್ನು ಭೇಟಿಯಾಗಲು ಇಚ್ಛೆಯನ್ನು ವ್ಯಕ್ತಪಡಿಸಿದರು. ಹಾಗೇ ಭೇಟಿಯಾಗುವುದಕ್ಕೆ ಸಮಯ ಕೂಡ ನಿಗಧಿಯಾಯಿತು. ಭೇಟಿಗೆ ಜಿನ್ನಾರವರು ಹೈದರಾಬಾದಿಗೆ ಧಾವಿಸಿ ಬಂದರು. ನಿಜಾಮರು ಭೇಟಿಗೆ ಕೋರಿ ಕಿಂಗ್ ಕೋಠಿ ಅರಮನೆಗೆ ಬಂದರು. ನಿಜಾಮರು ಇವರನ್ನು ನಿರೀಕ್ಷಿಸುತ್ತ ಆಸನರೂಢರಾಗಿ ಕುಳಿತಿದ್ದರು. ಜಿನ್ನಾ ಸಿಗರೇಟು ಸೇದುತ್ತಾ ಅರಮನೆ ಒಳಗೆ ಪ್ರವೇಶಿಸಿ ನಿಜಾಮರ ಮುಂದೆ ಕಾಲು ಮೇಲೆ ಕಾಲು ಚಾಚಿಕೊಂಡು ಆಸನದ ಮೇಲೆ ಕುಳಿತುಕೊಂಡಿದ್ದರು. ಇದರಿಂದ ಸಿಟ್ಟುಗೊಂಡ ನಿಜಾಮರು ''ಯಾರ ಸಮ್ಮುಖದಲ್ಲಿರುವಿರಿ ಎಂಬ ಪ್ರಜ್ಞೆ ನಿಮಗಿರುವಂತೆ ತೋರುವುದಿಲ್ಲ. ಹೀಗೇನೇ ಹೈದರಾಬಾದ್ ನಿಜಾಮರ ಸನ್ನಿಧಿಯಲ್ಲಿ ನೀವು ನಡೆದುಕೊಳ್ಳುವ ರೀತಿ'' ಎಂದು ತಡೆಯಲಾರದ ಕೋಪದಿಂದ ಗುಡುಗಿದರು. ಅವರ ಕೋಪ ಘರ್ಜನೆ ಅರಮನೆಯನ್ನೇ ನಡುಗಿಸಿತು. ನಿಜಾಮರ ಈ ರೌದ್ರಾವತಾರವನ್ನು ಯಾವ ಕಾಲದಲ್ಲಿಯೂ ನೋಡಿರಲಿಲ್ಲವೆಂದು ಅರಮನೆಯ ಹಳೇ ಊಳಿಗದವರೂ ಮತ್ತು ಭೇಟಿಯನ್ನು ವರ್ಣಿಸಿರುವ ನಿಜಾಮರ ಆಪ್ತ ಸಲಹೆಗಾರರಾದ ನವಾಬ್ ಹೋಷಿಯಾರ ಜಂಗ್ ಬರೆದಿರುತ್ತಾರೆ. ನಿಜಾಮರ ಅನಿರೀಕ್ಷಿತ ಕೋಪಕ್ಕೆ ಗುರಿಯಾದ ಜಿನ್ನಾ ತಾನು ಸೇದುತ್ತಿದ್ದ ಹೊಗೆಬತ್ತಿ ಎಸೆದು ಎದ್ದು ನಿಂತು ನಿಜಾಮರಲ್ಲಿ ಕ್ಷಮೆ ಯಾಚಿಸಿದರು.

ಆದರೆ ನಿಜಾಮರ ಕೋಪ ಕೂಡಲೇ ಇಳಿಯಲಿಲ್ಲ" ಏನಾಗಬೇಕು? ಏಕೆ ಬಂದಿರಿ? ಏನು ಹೇಳಬಯಸುವಿರೋ ಹೇಳಬಿಡಿ" ಎಂದು ಪ್ರಶ್ನೆಗಳ ಸುರಿಮಳೆಯೇ ಆಯಿತು."

"ಮಿರ್ಜಾ ಅವರ ನೇಮಕದ ಬಗ್ಗೆ ಮಾತಾನಾಡಲು ಬಂದಿದ್ದೇನೆ" ಎಂದು ವಾಕ್ಯ ಮುಗಿಸುವಷ್ಟರಲ್ಲೇ ನನ್ನ ರಾಜ್ಯದ ಆಂತರಿಕ ವಿಷಯದಲ್ಲಿ ಯಾರೂ ಪ್ರವೇಶ ಮಾಡುವುದು, ಹಾಗೆ ಸಲಹೆ ಮಾಡುವುದನ್ನು ನಾನು ಇಷ್ಟಪಡುವುದಿಲ್ಲ. ನನ್ನ ಪ್ರಜೆಗಳ ಕಲ್ಯಾಣಕ್ಕಾಗಿ ನಾನು ಏನು ಮಾಡಬೇಕು ಎಂಬುದು ನನಗೆ ಸರಿಯಾಗಿ ಗೊತ್ತಿದೆ. ಇದರಲ್ಲಿ ನೀವು ಅನವಶ್ಯಕವಾಗಿ ಕೈ ಹಾಕಬೇಡಿ ಎಂದರು. ಆದರೆ ಜಿನ್ನಾ ಈ ಕೋಪತಾಪಗಳಿಗೆ ಕಿವಿಕೊಡದೆ. "ನನ್ನ ಮಾತಿಗೆ ಕಿವಿಗೊಡದೆ ಹೋದರೆ ಹೈದರಾಬಾದಿನ ಆಂತರಿಕ ಸಮಸ್ಯೆಗಳಲ್ಲಾಗಲಿ, ರಾಜ್ಯಾಂಗ ರಚನಾ ಸಭೆಯಲ್ಲಾಗಲಿ ಮುಸ್ಲಿಂ ಲೀಗ್ ನಿಮಗೆ ಸಹಕಾರ ನೀಡುವುದಿಲ್ಲ" ಎಂದು ಬಾಣ ಪ್ರಯೋಗಿಸಿದರು. ನಿಜಾಮರಿಗೆ ಈ ಮಾತು ಕೇಳಿದ ತಕ್ಷಣ ಕೋಪ ಮತ್ತಷ್ಟು ಕೆರಳಿತು. "ಒಳ್ಳೆಯದು, ಯಾವ ಕಾಲದಲ್ಲೂ ನೀವು ನನಗೆ ಸಹಾಯವೆಸಗಿಲ್ಲ, ನಿಮ್ಮ ಸಹಕಾರದ ಅಗತ್ಯವೂ ನನಗಿಲ್ಲ. ನೀವು ಸುಮ್ಮನಿದ್ದರೆ ಸಾಕು" ಎಂಬುದಾಗಿ ತಿರುಗೇಟು ನೀಡಿದರು. ಮತ್ತೆ ಜಿನ್ನಾರವರು ರಾಜಕೀಯ ವಿಚಾರಗಳ ಕುರಿತು ಪ್ರಸ್ತಾಪಿಸಿದಾಗ "ನನಗೆ ಕೆಲಸವಿದೆ. ಬಿಡುವಿಲ್ಲ; ಸುಧಾರಣೆಗಳ ವಿಷಯ ಪ್ರಸ್ತಾಪಿಸಬೇಕಾದಲ್ಲಿ, ದಯಮಾಡಿ ಸಂಬಂಧ ಪಟ್ಟ ಸಚಿವರನ್ನು ಕಾಣಿ. ಇನ್ನೇನಾದರೂ ಹೇಳುವುದಿದೆಯೇ? ಇಲ್ಲವಷ್ಟೇ? ವಂದನೆ, ದಯಮಾಡಿಸಿ" ಎಂದು ಹೆಚ್ಚು ಮಾತನಾಡಲು ಅವಕಾಶ ಕೊಡದೆ ಭೇಟಿಯನ್ನು ನಿಜಾಮರು ಕೊನೆಗಾಣಿಸಿದರು.[೨]

ಆದರೆ ಮಹಮ್ಮದ್ ಅಲಿ ಜಿನ್ನಾ ಸುಮ್ಮನಿರುವ ವ್ಯಕ್ತಿಯಲ್ಲ. ಹೊರಗೆ ಬಂದೊಡನೆ ಸ್ಥಳೀಯ ಮುಸ್ಲಿಂ ಮುಖಂಡರನ್ನು ಭೇಟಿ ಮಾಡಿ ಮಿರ್ಜಾ ವಿರುದ್ಧ ಎತ್ತಿಕಟ್ಟುವುದರಲ್ಲಿ ಉದ್ಯುಕ್ತರಾದರು. ಮುಸ್ಲಿಂ ಮುಖಂಡರಾದ ಖಾಸಿಂ ರಜ್ವಿಗೆ ಮತ್ತು ರಜಾಕಾರರ ಇತರ ಮುಖಂಡರನ್ನು ಭೇಟಿಯಾಗಿ ವಿಷಯವನ್ನು ಪ್ರಸ್ತಾಪಿಸಿ ಮಿರ್ಜಾ ಅವರು ಪ್ರಧಾನಮಂತ್ರಿ ಹುದ್ದೆಗೆ ನೇಮಕವಾಗದಂತೆ ನಿಜಾಮನ ಮೇಲೆ ಒತ್ತಡ ಹೇರಿ ಎಂದು ಎತ್ತಿಕಟ್ಟಿದರು. ಜಿನ್ನಾನ ಮಾತು ಕೇಳಿದ ಸ್ಥಳೀಯ ಮುಸ್ಲಿಂ ಮುಖಂಡರು ದಿವಾನ ಹುದ್ದೆಗೆ ಮಿರ್ಜಾ ಅವರನ್ನು ನೇಮಕ ಮಾಡಬಾರದೆಂದು ನಿಜಾಮರ ಮೇಲೆ ಒತ್ತಡ ಹೇರಿದರು. ಆದರೆ ನಿಜಾಮರು ಯಾರ ಒತ್ತಡಕ್ಕೂ ಒಳಗಾಗದೆ ಹೈದರಾಬಾದಿನ ದಿವಾನರಾಗಿ ಮಿರ್ಜಾ ಇಸ್ಮಾಯಿಲರನ್ನು ನೇಮಕ ಮಾಡಿ ಅಧಿಕಾರ ಸ್ವೀಕರಿಸಿ ಎಂದು ಅಹ್ವಾನ ನೀಡಿದರು.

ಮಹಮ್ಮದ್ ಅಲಿ ಜಿನ್ನಾ ಇಷ್ಟಕ್ಕೆ ಸುಮ್ಮನಿರದೆ ವೈಸರಾಯರಿಗೆ ಪತ್ರ ಬರೆದು ಮಿರ್ಜಾರ ನೇಮಕ ತಡೆಯಿರೆಂದು ಕೇಳಿಕೊಂಡರೂ ಫಲಸಿಗಲಿಲ್ಲ. ಕೊನೆಗೆ ಜಿನ್ನಾ ಹೈದರಾಬಾದಿನ ಮುಸ್ಲಿಂ ಮುಖಂಡನಾದ ರಜ್ವಿಗೆ ದಿವಾನ ಮಿರ್ಜಾ ಎಂ ಇಸ್ಮಾಯಿಲ್‌ರಿಗೆ ಆಡಳಿತದಲ್ಲಿ ಸಹಾಯ ಮಾಡಬಾರದು ಎಂದು ಹೇಳಿದರು. ಖಾಸಿಂ ರಜ್ವಿ ಜಿನ್ನಾರ ಮಾತಿನಂತೆ ಮಿರ್ಜಾರಿಗೆ ಆಡಳಿತದಲ್ಲಿ ಕಿರುಕುಳ ನೀಡಲು

ಪ್ರಾರಂಭಿಸಿದನು. ಸ್ಥಳೀಯ ಮುಸ್ಲಿಂ ಮುಖಂಡರಿಗೆ ಖಾಸಿಂ ರಜ್ವಿಯ ಇಲ್ಲಸಲ್ಲದ ಮಾತು ಹೇಳಿ ಮಿರ್ಜಾ ಮುಸ್ಲಿಂ ವಿರೋಧಿ ಹಾಗೂ ಹಿಂದೂಗಳ ಪರವಾಗಿದ್ದಾರೆ ಎಂದು ವಾದಿಸಿ ಮುಸ್ಲಿಂ ಮುಖಂಡರನ್ನು ಮತ್ತು ರಜಾಕಾರನ್ನು ನಂಬಿಸಿ ನಿಜಾಮನ ಮೇಲೆ ಒತ್ತಡ ಹಾಕಿ ಕೊನೆಗೆ ಮಿರ್ಜಾ ಅವರಿಂದ ರಾಜೀನಾಮೆ ಯನ್ನು ಕೊಡಿಸಿದರು."[೧೪]

ಅಡಿಟಿಪ್ಪಣಿಗಳು

೧. ಚಂದ್ರಶೇಖರ್ ಎಸ್., ವಸಾಹತುಕಾಲಿನ ಕರ್ನಾಟಕ, ಪು.೨೭೫

೨. ಚಿನ್ನಸ್ವಾಮಿ ಸೋಸಲೆ ಎನ್.(ಸಂ), ದಿವಾನ್ ಸರ್.ಮಿರ್ಜಾ ಎಂ ಇಸ್ಮಾಯಿಲ್ ಕಾಲದ ಮೈಸೂರು ೨೦೧೨, ಪು.೨೮೮-೨೮೯

೩. ಚಂದ್ರಶೇಖರ್ ಎಸ್., ಪೂರ್ವೋಕ್ತ, ೨೦೦೬, ಪು.೨೭೭

೪. ನಾರಾಯಣರಾವ್ ವಿ.ಎಸ್., ಮಿರ್ಜಾ ಎಂ ಇಸ್ಮಾಯಿಲ್ ಅವರ ಜೀವನ ಚರಿತ್ರೆ, ೨೦೦೯, ಪು.೬೭, ೭೦, ೭೨

೫. ಅದೇ, ಪು.೭೩

೬. ಚಿನ್ನಸ್ವಾಮಿ ಸೋಸಲೆ ಎನ್., ಪೂರ್ವೋಕ್ತ, ೨೦೧೨, ಪು.೪೯೩-೪೯೪

೭. ನಾರಾಯಣರಾವ್ ವಿ.ಎಸ್., ಪೂರ್ವೋಕ್ತ, ೨೦೦೯, ಪು.೭೭

೮. ಮುನ್ನಿ ಕೆ.ಎಂ., ಒಂದು ಯುಗದ ಅಂತ್ಯ, ಪು.೬೫, ೬೬

೯. ನಾರಾಯಣರಾವ್ ವಿ.ಎಸ್., ಪೂರ್ವೋಕ್ತ, ೨೦೦೯, ಪು.೧೨೪, ೧೨೫, ೧೨೬

೧೦. ಅದೇ, ಪು.೧೧೫

೧೧. ಮಿರ್ಜಾ ಎಂ ಇಸ್ಮಾಯಿಲ್, ಮೈ ಪಬ್ಲಿಕ್ ಲೈಫ್, ೧೯೫೩, ಪು.೧೦೭

೧೨. ಮುನ್ನಿ ಕೆ.ಎಂ., ಪೂರ್ವೋಕ್ತ, ಪು.೬೪

## ಅಧ್ಯಾಯ ಏಳು

# ದಿವಾನ ಹುದ್ದೆಗೆ ರಾಜೀನಾಮೆ

೭.೧. ನಿಜಾಮನೊಂದಿಗೆ ಸಂಬಂಧ

೭.೨. ರಜಾಕಾರರ ಧೋರಣೆಗಳು

೭.೩. ಆಂತರಿಕ ಒತ್ತಡಗಳು

೭.೪. ರಾಜೀನಾಮೆ ನಿರ್ಧಾರ

೭.೫. ರಾಜೀನಾಮೆ ಪ್ರತಿಕ್ರಿಯೆ

## ಅಧ್ಯಾಯ ಏಳು

# ದಿವಾನ ಹುದ್ದೆಗೆ ರಾಜೀನಾಮೆ

ಮಿರ್ಜಾ ಎಂ ಇಸ್ಮಾಯಿಲ್‌ರು ಹೈದರಾಬಾದಿನ ದಿವಾನಗಿರಿಗೆ ರಾಜೀನಾಮೆ ಕೊಟ್ಟ ಸಂಗತಿಗಳ ಬಗ್ಗೆ ವಾದ ವಿವಾದಗಳು ಸಾಕಷ್ಟು ನಡೆದಿವೆ. ಸುಮಾರು ಹತ್ತು ತಿಂಗಳ ಕಾಲ ಈ ಸ್ಥಾನದಲ್ಲಿದ್ದ ಮಿರ್ಜಾ ಎಂ ಇಸ್ಮಾಯಿಲ್‌ರು ರಾಜೀನಾಮೆ ಕೊಟ್ಟಿದ್ದಕ್ಕೆ ಮುಖ್ಯವಾಗಿ ಪ್ರಚಲಿತದಲ್ಲಿರುವ ಕಾರಣಗಳು ಎರಡು: ಒಂದನೆಯದು ಆಗ ಪ್ರಬಲವಾಗುತ್ತಿದ್ದ ಇತ್ತೇಹಾದ್ ಉಲ್ ಮುಸ್ಲಿಮ್ ಸಂಸ್ಥೆಯ ಚಳುವಳಿ, ಎರಡನೆಯದಾಗಿ ನಿಜಾಮನು ರಜಾಕಾರರ ಮಾತು ಕೇಳುತ್ತಿದ್ದು ಮಿರ್ಜಾರ ಮೇಲೆ ವಿಶ್ವಾಸ ಇಡದದ್ದು. ಮಿರ್ಜಾ ಅವರ ರಾಜೀನಾಮೆಯ ಬಗ್ಗೆ ಚರ್ಚಿಸುವಾಗ ಮೇಲೆ ವಿವರಿಸಿದ ವಿಷಯಗಳಷ್ಟೇ ಅಲ್ಲದೆ ಕಾಸಿಂ ರಜ್ವಿಯ ಕುತಂತ್ರ, ಮಹಮ್ಮದ್ ಅಲಿ ಜಿನ್ನಾನ ನೀತಿ, ಹಾಗೇ ನಿಜಾಮರಿಗೂ ಮಿರ್ಜಾ ಅವರ ಮೇಲೆ ಬೆಳೆಯುತ್ತಿದ್ದ ಅತೃಪ್ತಿ ಮತ್ತು ಅಪನಂಬಿಕೆಗಳು ಮಿರ್ಜಾ ಅವರ ರಾಜೀನಾಮೆಗೆ ಕಾರಣವಾದ ಸಂಗತಿಗಳು. ಈ ಅಪನಂಬಿಕೆ ಮತ್ತು ಅತೃಪ್ತಿಗಳು ಮುಖ್ಯವಾಗಿ ವೈಯಕ್ತಿಕ ನೆಲೆಯಲ್ಲಿ ಹುಟ್ಟಿದವುಗಳೇ ಆಗಿವೆ.

ಮಿರ್ಜಾ ಆಡಳಿತಗಾರರಾಗಿ ಸ್ವತಂತ್ರ ಪ್ರವೃತ್ತಿಯುಳ್ಳವರಾಗಿದ್ದರು. ಸರಕಾರದ ಯಾವುದೇ ಕೆಲಸ ಕಾರ್ಯಗಳಲ್ಲಿ ಪ್ರಭಾವಿತ ವ್ಯಕ್ತಿಗಳೂ ಸೇರಿದಂತೆ ಬೇರೆಯವರ ನಡುವೆ ತಲೆ ಹಾಕುವುದನ್ನು ಮತ್ತು ಪ್ರಭಾವ ಬೀರುವುದನ್ನು ಇವರು ಸಹಿಸುತ್ತಿರಲಿಲ್ಲ. ಮುಸ್ಲಿಂ ಮುಖಂಡನಾದ ಕಾಸಿಂ ರಜ್ವಿ ಹೈದರಾಬಾದ್ ಸಂಸ್ಥಾನದ ಆಡಳಿತದಲ್ಲಿ ಹಸ್ತಕ್ಷೇಪ ಮಾಡುತ್ತಿದ್ದು, ಮಿರ್ಜಾರ ಬಗ್ಗೆ ಸಂಸ್ಥಾನದಲ್ಲಿ ಅಪಪ್ರಚಾರ ಮಾಡಿ ಮುಸ್ಲಿಂ ವಿರೋಧಿ ಎಂದು ಬಿಂಬಿಸಿರುವುದರಿಂದ ಮನನೊಂದ ಮಿರ್ಜಾ ಹೈದರಾಬಾದ್‌ನಲ್ಲಿ ಇರುವುದಕ್ಕಿಂತ ರಾಜೀನಾಮೆ ನೀಡುವುದು ಮೇಲೆಂದು ರಾಜೀನಾಮೆ ನೀಡಿದರು. ರಾಜೀನಾಮೆ ನೀಡುವುದಕ್ಕೆ ಅವರ ಮೇಲೆ ಒತ್ತಡ ತಂದ ಇತರ ಸಂಘಸಂಸ್ಥೆ ಮತ್ತು ಇತರ ಕಾರಣಗಳು ಈ ಕೆಳಗಿನಂತಿವೆ.

## ೭.೧. ನಿಜಾಮನೊಂದಿಗಿನ ಸಂಬಂಧ

ಮಿರ್ಜಾ ಎಂ ಇಸ್ಮಾಯಿಲ್ ಮೈಸೂರಿನಲ್ಲಿ ದಿವಾನರಾಗಿದ್ದಾಗಲೇ ಹೈದರಾಬಾದಿನ ಪ್ರಧಾನ ಮಂತ್ರಿಯಾಗಲು ನಿಜಾಮರಿಂದ ಕರೆ ಬಂದಿತ್ತು. ಆದರೆ ಮೈಸೂರಿನ ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರನ್ನು ಬಿಟ್ಟು ಹೋಗಲು ಇಚ್ಛಿಸದೆ ಆಗ ಹೈದರಾಬಾದಿನ ದಿವಾನರಾಗಲು ಒಪ್ಪಲಿಲ್ಲ. ಜಯಪುರದ ದಿವಾನರಾದಾಗಲು ಕೂಡ ನಿಜಾಮರು ಮತ್ತೆ ಆಹ್ವಾನ ನೀಡಿದರು. ಆವಾಗ ಕೂಡ ಒಪ್ಪಲಿಲ್ಲ. ಆದರೂ ನಿಜಾಮ ಮತ್ತು ಮಿರ್ಜಾ ಅವರ ಸಂಬಂಧ ಉತ್ತಮ ರೀತಿಯಿಂದ ಕೂಡಿತ್ತು. ಮಿರ್ಜಾ ಅವರು ನಿಜಾಮರಿಗೆ ಪತ್ರದ ಮೂಲಕ ಯೋಗಕ್ಷೇಮ ವಿಚಾರಿಸುತ್ತಾ ಬಲು ಆತ್ಮೀಯರಾಗಿದ್ದರು. ಕೊನೆಗೂ ಮಿರ್ಜಾ ಅವರಿಗೆ ಮುಸ್ಲಿಂ ರಾಜ್ಯದಲ್ಲಿ ಕೆಲಸ ಮಾಡಬೇಕೆಂಬ ಅಭಿಲಾಷೆ ಹುಟ್ಟಿಕೊಂಡಿತ್ತು. ನಿಜಾಮರ ಪತ್ರಕ್ಕೆ ತಾವು ದಿವಾನರಾಗಲು ಒಪ್ಪಿಕೊಂಡಿರುವುದಾಗಿ ಉತ್ತರ ಬರೆದರು. ಇದರಿಂದ ನಿಜಾಮರಿಗೆ ತುಂಬಾ ಸಂತೋಷವಾಯಿತು. ಹೀಗೆ ಪ್ರಧಾನಮಂತ್ರಿಯ ಸ್ಥಾನ ಕೊಡುವ ವಿಷಯದಲ್ಲಿ ನಿಜಾಂ ಮತ್ತು ಮಿರ್ಜಾ ಉಭಯತ್ರರ ನಡುವೆ ಸುಮಾರು ಒಂದು ನೂರು ಕಾಗದ ಪತ್ರಗಳ ವಿನಿಮಯ ನಡೆಯಿತು.

ನಿಜಾಮರು ಪ್ರಪಂಚದ ಶ್ರೀಮಂತ ಶ್ರೇಣಿಯಲ್ಲಿ ಉಚ್ಚಸ್ಥಾನ ಪಡೆದಿದ್ದರು. ಬೆಲೆ ಕಟ್ಟಲು ಸಾಧ್ಯವಾಗದಷ್ಟು, ವಜ್ರ ವೈಡೂರ್ಯ, ಪಚ್ಚೆ, ಮುತ್ತು, ಬಂಗಾರ ಇವರ ಪೆಟ್ಟಿಗೆಗಳಲ್ಲಿ ತುಂಬಿ ತುಳುಕುತ್ತಿದ್ದವು. ಆದರೂ ವೆಚ್ಚ ಮಾಡುವುದರಲ್ಲಿ ಅವರದು ಬಿಗಿ ಹಿಡಿತದ ಕೈ. ಅವರು ಸಾಮಾನ್ಯ ಜನರು ತೊಡುವ ಹತ್ತಿಯ ಒರಟು ಬಟ್ಟೆಯ ಉಡುಪನ್ನೇ ಧರಿಸುತ್ತಿದ್ದರು. ಹಳೆಯದಾದರೂ ಅದನ್ನು ತೊರೆಯುತ್ತಿರಲಿಲ್ಲ. ಪುರಾತನ ಕಾಲದ ಲೊಡ್ಡು ಮೋಟಾರಿನಲ್ಲಿಯೇ ಸಂಚಾರ. ಅವರ ಅತಿಥ್ಯ ಸ್ವೀಕರಿಸಿ ಊಟಕ್ಕೆ ಹೋದರೆ ಮತ್ತೆ ಮನೆಗೆ ಬಂದು ಊಟ ಮಾಡಬೇಕು ಎಂದು ಜನ ಹಾಸ್ಯ ಮಾಡುವುದುಂಟು. ನಿಜಾಮರು ತಮ್ಮ ಆಸ್ಥಾನದಲ್ಲಿ ಕೆಲಸ ಮಾಡುವ ಸೈನಿಕರಿಗೆ ಆಡಳಿತ ಅಧಿಕಾರಿಗಳಿಗೆ ವೇತನ ಕೊಡುವುದರಲ್ಲಿ ಚೌಕಾಸಿ ಮಾಡುತ್ತಿದ್ದರು. ಮಿರ್ಜಾ ಅವರು ನಿಜಾಮನಲ್ಲಿ ಆರು ಸಾವಿರ ತಿಂಗಳ ವೇತನ, ಉಚಿತ ವಸತಿ, ವಾಹನ ಸೌಲಭ್ಯ ನೀಡಬೇಕೆಂದು ಕೇಳಿದ್ದರು. ಅಷ್ಟೊಂದು ವೇತನ ಕೊಡಲು ಬಯಸದ ನಿಜಾಮರು ಸದ್ಯ ಎರಡು ವರ್ಷ ಕಾಲ ತಾತ್ಕಾಲಿಕವಾಗಿ ಮಂತ್ರಿ ಸಂಪುಟದ ಸದಸ್ಯರಾಗಿ ತಾವು ಪ್ರಧಾನಿಯಾಗಲು ಅರ್ಹರೆಂಬ ವಿಶ್ವಾಸ ಮೂಡಿದ ತರುವಾಯ ನಿಮ್ಮನ್ನು ಪ್ರಧಾನಿಯಾಗಿ ತೆಗೆದುಕೊಳ್ಳುವುದಾಗಿ ತಿಳಿಸಿದರು! ಪ್ರಧಾನಮಂತ್ರಿಗಿಂತ ಕಡಿಮೆಯ ಸ್ಥಾನ ತಾನು ಸ್ವೀಕರಿಸಲಾರೆನೆಂದು ಮಿರ್ಜಾ ಉತ್ತರಿಸಿದರು. ಬರೋಡಾ ಮಹಾರಾಜರು ತನಗೆ ತಿಂಗಳಿಗೆ ಎಂಟು ಸಾವಿರ ಸಂಭಾವನೆ, ಉಚಿತ ವಾಹನ, ಎರಡು ಮೋಟಾರ್, ಬೆಂಗಳೂರಿಗೆ ವರ್ಷಕ್ಕೆ ಎರಡು ಬಾರಿ ಹೋಗಿ ಬರಲು ರೈಲ್ವೆ ವಿಶೇಷ ಬೋಗಿ ಕೊಡಲು ಒಪ್ಪಿದ್ದರು ಎಂದು ತಿಳಿಸಿದರು.

ಜಯಪುರದಲ್ಲಿ ತನಗೆ ಆರು ಸಾವಿರ ಮಾಸಿಕ ವೇತನ, ಉಚಿತ ವಸತಿ, ಒಂದು ಮೋಟಾರು, ಒಂದು ಮೋಟಾರ್ ಬಸ್, ಇನ್ನೂ ಅಧಿಕ ಮೋಟಾರುಗಳನ್ನು ಬಳಸಿಕೊಳ್ಳುವ ಅವಕಾಶ ಕೊಟ್ಟಿದ್ದರು. ಹೈದರಾಬಾದ್ ಸಂಸ್ಥಾನವು ಜಯಪುರ ಬರೋಡ ಸಂಸ್ಥಾನಗಳಿಗಿಂತ ದೊಡ್ಡದು, ಆದ್ದರಿಂದ ತನಗೆ ಅಧಿಕ ವೇತನ ದೊರೆಯಬೇಕೆಂಬುದು ಮಿರ್ಜಾ ಅವರ ವಾದವಾಗಿತ್ತು. ಅನೇಕ ಕಾಗದ ಪತ್ರಗಳ ವಿನಿಮಯ ಆದನಂತರ ಮಿರ್ಜಾ ಬೇಸತ್ತು ವೇತನ ನಿಷ್ಕರ್ಷಿಸುವುದನ್ನು ನಿಜಾಮರಿಗೆ ಬಿಟ್ಟರು.

ನಿಜಾಮರು ಮಿರ್ಜಾ ಅವರನ್ನು ದಿವಾನರಾಗಿ ನೇಮಿಸುವುದಕ್ಕೆ ಹಲವಾರು ಕಾರಣಗಳಿದ್ದವು. ಮಿರ್ಜಾ ಅವರ ದೀರ್ಘಕಾಲದ ರಾಜಕೀಯ ಅನುಭವ, ಹೈದರಾಬಾದಿನ ರಾಜಕೀಯ ಕಗ್ಗಂಟನ್ನು ಬಿಡಿಸಿ ಮೈಸೂರು ಸಂಸ್ಥಾನದಲ್ಲಿ ಮಾಡಿದ ಪ್ರಗತಿಪರ ಕೆಲಸಗಳು, ಆಂತರಿಕ ವಿಷಯಗಳ ಮತ್ತು ಬಾಹ್ಯ ವಿಷಯಗಳಾದ ಕಾಂಗ್ರೆಸ್ಸಿನ ನಿಯಂತ್ರಣ, ಲಂಡನ್‌ನಲ್ಲಿ ನಡೆದ ದುಂಡು ಮೇಜಿನ ಪರಿಷತ್ತಿನಲ್ಲಿ ದೇಶೀಯ ಸಂಸ್ಥಾನಗಳ ಪರವಾಗಿ ಭಾಗವಹಿಸಿದ್ದು, ಮೇಲಾಗಿ ಮಿರ್ಜಾ ಅವರಿಗೆ ಕಾಂಗ್ರೆಸ್ ನಾಯಕರೊಂದಿಗೆ ಒಳ್ಳೆಯ ಸಂಪರ್ಕ ಇದ್ದದ್ದು, ಅವರ ಸ್ವಾಮಿನಿಷ್ಠೆ, ನಿಷ್ಠುರತೆ ಹಾಗೂ ದೂರದೃಷ್ಟಿ ಹೈದರಾಬಾದ್ ಸಂಸ್ಥಾನಕ್ಕೆ ಉತ್ತಮ ಆಸ್ತಿಯಾಗುವುದೆಂದು ನಿಜಾಮ ಸ್ವಾಭಾವಿಕವಾಗಿಯೇ ಯೋಚಿಸಿದನು. ಎಲ್ಲಕ್ಕೂ ಮಿಗಿಲಾಗಿ ಬ್ರಿಟಿಶರ ಜೊತೆ ಸಂಧಾನ ನಡೆಸಲು ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳ ಪರಿಣತಿ ಬೇಕಾಗಿದ್ದು, ಮಿರ್ಜಾ ಅವರು ಅದನ್ನು ಹೊಂದಿದ್ದರು.

ಮಿರ್ಜಾ ಅವರು ದಿವಾನರಾಗಿ ಅಧಿಕಾರ ಸ್ವೀಕರಿಸಿದ ನಂತರ ನಿಜಾಮರ ಆಸೆಯಂತೆ ರಾಜ್ಯದ ಕೆಲವು ಪ್ರಮುಖ ಸಮಸ್ಯೆಗಳನ್ನು ಬಗೆಹರಿಸುವ ಜವಾಬ್ದಾರಿಯನ್ನು ಹೊರಬೇಕಾಯಿತು. ಹೈದರಾಬಾದಿನಲ್ಲಿ ಕೆಲವು ಪ್ರಮುಖ ಕೆಲಸಗಳಾದ ನಗರ ಸ್ವಚ್ಛತೆ, ರಸ್ತೆಗಳ ನಿರ್ಮಾಣ ಮಾಡುವುದು ಹಾಗೇ ಸಂಸ್ಥಾನದ ಜನತೆಯಲ್ಲಿ ನಿಜಾಮನ ಆಡಳಿತದ ಮೇಲೆ ನಂಬಿಕೆ ಹುಟ್ಟುವಂತೆ ಮಾಡುವುದು. ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವುದು ಮುಂತಾದವು ಮುಖ್ಯವಾಗಿದ್ದವು. ಹೀಗೆ ಮಿರ್ಜಾ ಅವರು ದಿನೇ ದಿನೇ ಬೆಳೆಯುತ್ತಿರುವುದನ್ನು ಸಹಿಸದ ರಜಾಕಾರರು ನಿಜಾಮನಿಗೆ ಮಿರ್ಜಾ ಅವರ ಬಗ್ಗೆ ಇಲ್ಲಸಲ್ಲದ್ದು ಹೇಳುತ್ತಿದ್ದರು. ಈ ಹೇಳಿಕೆಯ ಮಾತಿಗೆ ಮನ್ನಣೆ ಕೊಟ್ಟು ನಿಜಾಮನು ಮಿರ್ಜಾರನ್ನು ಅನುಮಾನದಿಂದ ನೋಡಲು ಪ್ರಾರಂಭಿಸಿದನು. ಹಾಗೇ ರಜಾಕಾರರ ಕೈಗೊಂಬೆಯಾಗಿ ನಿಜಾಮನು ಮಿರ್ಜಾಗೆ ಆಡಳಿತದಲ್ಲಿ ಸಹಕರಿಸದೆ ರಜಾಕಾರರಿಂದ ಸಲಹೆ ಪಡೆಯುತ್ತಿದ್ದನು. ಇದರಿಂದ ಮಿರ್ಜಾರಿಗೆ ತುಂಬಾ ತೊಂದರೆಯಾಯಿತು. ಆದರೂ ಸಹಿಸಿಕೊಂಡು ಹೈದರಾಬಾದ್ ಅಭಿವೃದ್ಧಿ ಮಾಡಬೇಕೆಂದು ಕನಸು ಕಾಣುತ್ತಿದ್ದರು.[೨]

ಹೈದರಾಬಾದಿನ ಸೇನೆ ಮತ್ತು ಪೊಲೀಸ್ ಪಡೆಯಲ್ಲಿ ಶೇಕಡ ೨೫ರಷ್ಟಾದರೂ ಹಿಂದೂಗಳಿರಬೇಕೆಂದು ಮಿರ್ಜಾ ಪ್ರಯತ್ನಿಸಿದರು. ಇದರಿಂದ ರಜ್ವಿ ಮತ್ತು ನಿಜಾಮರ ಜಾತೀಯ ಪಡೆಗಳಲ್ಲಿಟ್ಟಿದ್ದ ವಿಶ್ವಾಸ

ಕುಗ್ಗಿಸಬಹುದಾಗಿತ್ತು. ಇದಕ್ಕೆ ಸಿಕಂದರಾಬಾದಿನಲ್ಲಿ ರಕ್ಷಣೆ ಮತ್ತು ಶಾಂತಿ ಪಾಲನೆಗಾಗಿ ಬ್ರಿಟಿಶರ ಕಾಲದಿಂದಲೂ ತಮ್ಮ ಕೆಲವು ತುಕಡಿಗಳನ್ನು ಇರಿಸುವುದು ವಾಡಿಕೆಯಾಗಿತ್ತು. ತನ್ನ ನೆಲೆಯ ಮೇಲೆ ವಿದೇಶೀ ಸೈನ್ಯವಿರುವುದು ತನ್ನ ಸಾರ್ವಭೌಮತ್ವಕ್ಕೆ ಅಪಮಾನಕರ. ಆದ್ದರಿಂದ ಭಾರತ ರಕ್ಷಣಾ ದಳದ ಈ ತುಕಡಿಗಳನ್ನು ಹಿಂದಕ್ಕೆ ಕರೆಸಿಕೊಳ್ಳಬೇಕೆಂದು ನಿಜಾಮರು ಸ್ವತಂತ್ರ ಭಾರತ ಸರ್ಕಾರವನ್ನು ಒತ್ತಾಯ ಪಡಿಸತೊಡಗಿದರು. ಭಾರತ ರಕ್ಷಣಾ ಪಡೆಗಳು ಸಿಕಂದರಾಬಾದಿನಿಂದ ಕಾಲ್ತೆಗೆದರೆ ತಮ್ಮನ್ನು ಮತ್ತು ತಮ್ಮ ರಾಜ್ಯವನ್ನು ಅನಾಯಕತ್ವದಿಂದ ಯಾರು ರಕ್ಷಿಸುತ್ತಾರೆ ಎಂದು ಮಿರ್ಜಾ ನಿಜಾಮರನ್ನು ಕೇಳಿದರು. ನನ್ನ ಸೇವೆ ಮತ್ತು ರಜಾಕಾರರಿಗಿಂತ ಇನ್ನು ಯಾರು ಬೇಕು ಎಂದರು ನಿಜಾಮರು. ಇದರಿಂದ ಮಿರ್ಜಾರ ಮತ್ತು ನಿಜಾಮರ ಸಂಬಂಧ ಹದಗೆಡಲಾರಂಭಿಸಿತು. ೧೯೪೭ರಲ್ಲಿ ಭಾರತದ ವಿಭಜನೆಯಾಗುವ ಸಾಧ್ಯತೆ ಹೆಚ್ಚಾಗಿರುವುದನ್ನು ಅರಿತುಕೊಂಡು ನಿಜಾಮನು ಬ್ರಿಟಿಶರ ಸಹಾಯದಿಂದ ತನ್ನ ಸಂಸ್ಥಾನವನ್ನು ಪ್ರತ್ಯೇಕ ಡೊಮಿನಿಯನ್‌ನ ಸ್ಥಾನಮಾನ ಪಡೆಯಲು ಪ್ರಯತ್ನ ಆರಂಭಿಸಿದನು. ಭಾರತಕ್ಕೆ ಸೇರಿಕೊಳ್ಳದೆ ಪ್ರತ್ಯೇಕವಾಗಿ ಉಳಿಯಬೇಕು, ಇಲ್ಲವೇ ಪಾಕಿಸ್ತಾನಕ್ಕೆ ಸೇರಬೇಕು ಎಂಬ ಭಾವನೆ ನಿಜಾಮನದ್ದಾಗಿತ್ತು. ಇಂತಹ ಅಪಾಯಕಾರಿ ವಿಷಯವನ್ನು ಮನಗಂಡ ಮಿರ್ಜಾ ಅವರು ನಿಜಾಮರಿಗೆ ತಿಳಿಹೇಳಲು ಪ್ರಯತ್ನಿಸಿ ವಿಫಲರಾದರು. ಪ್ರಧಾನಮಂತ್ರಿಯಾದ ಮಿರ್ಜಾರ ಈ ಪ್ರಯತ್ನದಿಂದ ಸಿಟ್ಟಿಗೆದ್ದ ನಿಜಾಮನು ಮಿರ್ಜಾರ ಮೇಲೆ ಕೋಪಿಸಿಕೊಂಡು ಪ್ರಧಾನಿಯ ಅವಶ್ಯಕತೆ ನಮಗಿಲ್ಲ ಎಂದು ಉದ್ಗಾರ ತೆಗೆದನು. ಈ ಮಾತಿನಿಂದ ಮಿರ್ಜಾ ಅವರ ಉತ್ಸಾಹಕ್ಕೆ ಮಣ್ಣೆರೆಚಿದಂತಾಗಿ ೧೯೪೭ ಮೇ ೧೫ರಂದು ಅವರು ರಾಜೀನಾಮೆ ಕೊಟ್ಟರು.[೨]

ಮಿರ್ಜಾ ಅವರು ನಿಜಾಮನಿಗೆ ನನ್ನನ್ನು ನಿವೃತ್ತಿಗೊಳಿಸಿ ಎಂದು ಮೇ ೧೫, ೧೯೪೭ರಲ್ಲಿ ದೀರ್ಘ ಪತ್ರ ಬರೆದರು. ಆ ಪತ್ರದಲ್ಲಿ ಹೈದರಾಬಾದಿನ ಸಂಸ್ಥಾನ ಕುರಿತು ಹೇಳುತ್ತಾ, 'ತಮಗೆ ಹಾಗೂ ಹೈದರಾಬಾದಿಗೆ ನನ್ನ ದೀರ್ಘ ಅನುಭವದ ಫಲಧಾರೆ ಎರೆದು ಈ ಸಂಸ್ಥಾನವನ್ನು ಶ್ರೇಷ್ಠ ರಾಜ್ಯವನ್ನಾಗಿ ಮಾಡಬೇಕೆಂಬ ಹಿರಿಯಾಸೆಯಿಂದ ತಮ್ಮ ಆಹ್ವಾನ ಸ್ವೀಕರಿಸಿ ಬಂದೆ, ನನ್ನ ಹಿರಿಯಾಸೆ ಕೈಗೂಡಿಸಲು ಅನೇಕ ಯೋಜನೆಗಳನ್ನು ತಯಾರಿಸಿದ್ದೆ, ಆದರೆ ಹೆಜ್ಜೆ ಹೆಜ್ಜೆಗೂ ಹಲವು ತಿಳಿಗೇಡಿ ಮಹಮ್ಮದೀಯರು ನನ್ನನ್ನು ವಿರೋಧಿಸುತ್ತಲೇ ಬಂದಿದ್ದಾರೆ. ಈ ಪುಂಡರು ತಮ್ಮ ಸಂತತಿಯ ಮತ್ತು ನನ್ನ ನಾಶಕ್ಕೆ ಸಂಚು ಮಾಡುತ್ತಿದ್ದಾರೆ. ಅಧಿಕಾರಿಗಳೂ ಇವರ ಬೆಂಬಲಿಗರಾಗಿದ್ದಾರೆ. ಈ ಪುಂಡರಿಂದ ರಕ್ಷಣೆ ಕೋರಿದಾಗ ತಾವು ಮೌನ ತಾಳಿ ತಟಸ್ಥರಾಗಿದ್ದಿರಿ. ಇದರಿಂದ ತಮ್ಮ ಬೆಂಬಲವೂ ಅವರಿಗೆ ಇದೆ ಎಂಬ ವದಂತಿಗೆ ಪುಷ್ಟಿ ಕೊಟ್ಟಂತೆ ಆಗಿದೆ. ತಮ್ಮ ಪೂರ್ಣ ಸಹಕಾರ ಮತ್ತು ವಿಶ್ವಾಸಕ್ಕೆ ನಾನು ಪಾತ್ರನಾಗದಿರುವಾಗ ಹೈದರಾಬಾದಿನಲ್ಲಿ ಉಳಿದು ನಾನೇನು ಮಾಡಲಿ, ಆದ್ದರಿಂದ ನನ್ನನ್ನು ಪ್ರಧಾನಿಯ ಕೆಲಸದಿಂದ ನಿವೃತ್ತಿಗೊಳಿಸಬೇಕಾಗಿ ಪ್ರಾರ್ಥಿಸುತ್ತೇನೆ" ಎಂದು ಬರೆಯುತ್ತಾ, ಮುಂದೆ ಸ್ವತಂತ್ರ ಭಾರತದಲ್ಲಿ ತಾವು

ಅನೇಕ ಜಟಿಲ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಈ ಸನ್ನಿವೇಶದಲ್ಲಿ ಶಕ್ತಿ ಮೀರಿ ದುಡಿಯಲು ಉದ್ದೇಶಿಸಿದ್ದೆ. ಭಗವಂತನ ಚಿತ್ತ ನನ್ನ ಹೈದರಾಬಾದಿನ ಅನುಭವ ಮತ್ತು ನೆನಹು ದುಃಖಮಯವಾಗಿದ್ದರೂ ಮುಂದೆ ತುಂಬಾ ಅಪಾಯ ಕಾದಿರುವುದನ್ನು ನಾನು ಅರಿತಿದ್ದರೂ ದಯಾಮಯನಾದ ಭಗವಂತ ಅಸಫಜಾ ಸಂತತಿಯನ್ನು ರಕ್ಷಿಸಲೆಂದು ಸದಾ ಪ್ರಾರ್ಥಿಸುತ್ತೇನೆ" ಎಂದು ಪತ್ರದಲ್ಲಿ ಬರೆದರು.

ಮಿರ್ಜಾ ಹೈದರಾಬಾದನ್ನು ಬಿಟ್ಟು ಬಂದರೂ ಅಸಫಜಾ ಸಂತತಿಯನ್ನು ಉಳಿಸಬೇಕೆಂಬ ಉತ್ಕಟ ಅಭಿಲಾಷೆ ಅವರನ್ನು ಬಿಟ್ಟಿರಲಿಲ್ಲ. ಭಾರತದ ರಾಜಕೀಯ ಪರಸ್ಥಿತಿ ಬಹಳ ಬದಲಾಗಿತ್ತು. ಸರ್ದಾರ ಪಟೇಲರು ಎಲ್ಲ ದೇಶೀಯ ಸಂಸ್ಥಾನಗಳೂ ಸ್ವತಂತ್ರ ಭಾರತದೊಡನೆ ವಿಲೀನವಾಗುವಂತೆ ಮಾಡುತ್ತಿದ್ದರು. ಈ ಸನ್ನಿವೇಶದಲ್ಲಿ ಹೈದರಾಬಾದ್ ಸ್ವತಂತ್ರವಾಗಿ ಉಳಿಯುವ ಹಗಲುಗನಸು ಕಾಣುತ್ತಿತ್ತು. ಸೂಕ್ಷ್ಮವಾಗಿ ಆಲಿಸಿದ ಮಿರ್ಜಾ ಹೈದರಾಬಾದಿನ ಸಂಸ್ಥಾನದ ಪರವಾಗಿ ದಿಲ್ಲಿಯಲ್ಲಿ ರಾಷ್ಟ್ರೀಯ ಕಾಂಗ್ರೆಸಿನ ನಾಯಕರಿಗೆ ಮನವರಿಕೆ ಮಾಡುತ್ತಾ ನಿಜಾಮರಿಗೆ ತಿಳಿ ಹೇಳಿದರೂ ಇದಕ್ಕೆ ನಿಜಾಮರು ನನ್ನ ಪರವಾಗಿ ದಿಲ್ಲಿಗೆ ಹೋಗುವುದಕ್ಕೆ ಹೇಳಿದವರಾರು ಎಂದು ತರಾಟೆಗೆ ತೆಗೆದುಕೊಂಡರು. ಇದರಿಂದ ಮಿರ್ಜಾ ಮನನೊಂದು ಬೆಂಗಳೂರಿಗೆ ವಾಪಸಾದರು.[೪]

## ೭.೨. ರಜಾಕಾರರ ಧೋರಣೆಗಳು

ಹೈದರಾಬಾದಿನ ನಿಜಾಮನ ಆಹ್ವಾನದ ಮೇರೆಗೆ ಮಿರ್ಜಾ ದಿವಾನರಾಗಲು ಒಪ್ಪಿಕೊಂಡಾಗ ಇದರಿಂದ ಜಿನ್ನಾಗೆ ಮುಸ್ಲಿಂ ರಾಜರ ಅಧೀನದ ಅತಿ ದೊಡ್ಡ ರಾಜ್ಯವಾದ ಹೈದರಾಬಾದಿಗೆ ಹಿಂದೂ ಪಕ್ಷಪಾತಿಯಾದ ಮಿರ್ಜಾ ಪ್ರಧಾನಿಯಾದರೆ ತನ್ನ ಧ್ಯೇಯ ಸಾಧನೆಗೆ ಅಡಚಣೆಯಾದೀತೆಂಬ ಆತಂಕ ಮೂಡಿತ್ತು. ಆದರಿಂದ ನಿಜಾಮರಿಗೇ ಅವರು ಬೆದರಿಕೆ ಹಾಕಿದರು. ಆದರೆ ನಿಜಾಮರು ಇದಕ್ಕೆ ಯಾವುದೇ ಮಾನ್ಯತೆ ನೀಡದ್ದರಿಂದ ಹೇಗಾದರೂ ಮಾಡಿ ಮಿರ್ಜಾರ ನೇಮಕ ತಡೆಯಬೇಕೆಂದು ರಜಾಕಾರರಿಗೆ ಜಿನ್ನಾ, ಮಿರ್ಜಾ ಅವರ ಬಗ್ಗೆ ಇಲ್ಲಸಲ್ಲದನ್ನು ಹೇಳಿದರು. ಅದರಿಂದ ರಜಾಕಾರರು ಮಿರ್ಜಾ ಅವರ ನೇಮಕವನ್ನು ರದ್ದುಪಡಿಸಬೇಕೆಂದು ನಿಜಾಮನ ಮೇಲೆ ಒತ್ತಡ ತಂದರು. ಯಾವುದೇ ಒತ್ತಡಕ್ಕೆ ಮಣಿಯದೆ ತಮ್ಮ ನೇಮಕ ಆದೇಶವನ್ನು ನಿಜಾಮರು ಮಿರ್ಜಾ ಅವರಿಗೆ ರವಾನಿಸಿದರು. ಇದರಿಂದ ಕೋಪಗೊಂಡ ರಜಾಕಾರರು ಮಿರ್ಜಾ ಅವರಿಗೆ ಆಡಳಿತದಲ್ಲಿ ಸಹಕಾರ ನೀಡಲಿಲ್ಲ. ಹಾಗೇ ಮಿರ್ಜಾ ರೂಪಿಸಿದ್ದ ಕಾಯ್ದೆ ಕಾನೂನುಗಳನ್ನು ವಿರೋಧಿಸಲಾರಂಭಿಸಿದರು. ನಿಜಾಮರಿಗೆ ಮಿರ್ಜಾನ ಮೇಲೆ ಸುಳ್ಳು ಅಪವಾದವನ್ನು ಹೇರುತ್ತಾ ಅವರ ಮಧ್ಯೆ ವೈಮನಸ್ಸಿಗೆ ಕಾರಣರಾದರು. ಮೊದಮೊದಲು ಇವುಗಳಿಗೆ ಕಿವಿಕೊಡದ ನಿಜಾಮರು ನಂತರ ರಜಾಕಾರರ ಸುಳ್ಳು ಮಾತನ್ನು ನಂಬಿ ಮಿರ್ಜಾ ಅವರ ಮೇಲೆ ನಂಬಿಕೆ ಇಡದೇ ಆಡಳಿತದಲ್ಲಿ ಕೂಡ ಸಹಾಯ ಮಾಡದೆ ತಟಸ್ಥರಾಗಿ ಉಳಿದುಕೊಂಡರು.[೫]

ಕಾಸಿಂ ರಜ್ವಿ ಮುಸ್ಲಿಂ ಮುಖಂಡನಾಗಿ ಹಾಗೂ ಇತ್ತೇಹಾದ್‌ನ ನಾಯಕನಾಗಿ ರಜಾಕಾರರಿಗೆ ಸಲಹೆಗಾರನಾಗಿದ್ದನು. ಒಬ್ಬ ನಾಯಕನಿಗೆ ಇರಬೇಕಾದ ಎಲ್ಲಾ ಗುಣಗಳನ್ನು ಇವನು ಬೆಳೆಸಿಕೊಂಡಿದ್ದನು. ಮುಸ್ಲಿಮರಿಗೆ ಧರ್ಮದ ಬಗ್ಗೆ ಭಾಷಣ ಮಾಡುತ್ತಾ ಪ್ರಚೋದನಕಾರಿ ಮಾತನಾಡಿ, ಸಂಸ್ಥಾನದಲ್ಲಿ ತನ್ನದೇಯಾದ ಒಂದು ಸ್ಥಾನಮಾನವನ್ನು ಉಳಿಸಿಕೊಂಡಿದ್ದನು. ಮುಸ್ಲಿಮರು ಒಗಟ್ಟಿನಿಂದ ನಿಜಾಮನ ಆಳ್ವಿಕೆಯನ್ನು ಬೆಂಬಲಿಸಿ ಅದರ ರಕ್ಷಣೆಗಾಗಿ ಸದಾ ಸಿದ್ಧರಾಗಿರಬೇಕು. ಆಳ್ವಿಕೆಯನ್ನು ವಿರೋಧಿಸಿದವರಿಗೆ ಯಾವುದೇ ಕಾರಣ ಶಿಕ್ಷಿಸದೆ ಬಿಡಬಾರದೆಂದು ರಜಾಕಾರರ ಮನಮುಟ್ಟುವಂತೆ ಹೇಳುತ್ತಿದ್ದನು. ರಜ್ವಿಯ ಮಾತಿನಿಂದ ರಜಾಕಾರರು ಸದಾ ಸಿದ್ಧರಾಗಿರುತ್ತಿದ್ದರು. ಹೀಗೆ ತನ್ನ ಚಾಣಾಕ್ಷತನದಿಂದ ಕಾಸಿಂ ರಜ್ವಿಯು ನಿಜಾಮನ ಮೇಲೆ ಹಿಡಿತವನ್ನು ಸಾಧಿಸಿ ನಂತರ ಸಂಸ್ಥಾನದ ಮೇಲೆ ತನ ಕಪ್ಪು ನೆರಳು ಬೀಳುವಂತೆ ಮಾಡಿದನು. ಇದರಿಂದ ಆಡಳಿತದಲ್ಲಿದ್ದ ಅಧಿಕಾರಿಗಳೆಲ್ಲಾ ರಜ್ವಿಯ ಮಾತಿಗೆ ಮನ್ನಣೆ ಕೊಡುತ್ತಿದ್ದರು. ಮಿರ್ಜಾರವರಿಗೆ ಆಡಳಿತದಲ್ಲಿ ಯಾವುದೇ ಅಧಿಕಾರಿಯು ಸಹಕಾರ ನೀಡುತ್ತಿರಲಿಲ್ಲ.[೬] ಸರ್.ಮಿರ್ಜಾ ತಮ್ಮ ಪ್ರಭುಗಳ ಮನೋಭಾವವನ್ನು ಚೆನ್ನಾಗಿ ತಿಳಿದುಕೊಳ್ಳಲಿಲ್ಲ. ಹೈದರಾಬಾದಿನಲ್ಲಿ ವಿಶಿಷ್ಟವಾದಂತಹ ಸುಧಾರಣೆ ಜಾರಿಗೆ ತರಬೇಕೆಂಬುದು ಅವರ ನಿರೀಕ್ಷೆಯಾಗಿತ್ತು. ೧೨೨ ಸದಸ್ಯರನ್ನೊಳಗೊಂಡ ಲೆಜಿಸ್ಲೇಟಿವ್ ಕೌನ್ಸಿಲ್ ಒಂದನ್ನು ಸ್ಥಾಪಿಸಬೇಕಾಗಿತ್ತು. ಇದರಲ್ಲಿ ೭೬ ಸದಸ್ಯರನ್ನು ಆರಿಸಬೇಕಾಗಿತ್ತು. ಉಳಿದವರನ್ನು ನಾಮಕರಣ ಮೂಲಕ ನೇಮಕ ಮಾಡಬೇಕಾಗಿತ್ತು. ಮುಸ್ಲಿಮರು ಮತ್ತು ಮುಸ್ಲಿಮೇತರರ ನಡುವಣ ೫೦:೫೦ ಪ್ರಮಾಣದ ಆಧಾರದ ಮೇಲೆ ಲೆಜಿಸ್ಲೇಟಿವ್ ಕೌನ್ಸಿಲ್‌ಗೆ ಚುನಾವಣೆ ನಡೆಯ ಬೇಕಾಯಿತು. ಆದರೆ ಒಂದು ಷರತ್ತು ಇತ್ತು. ಚುನಾಯಿತನಾಗಲಿರುವ ಅಭ್ಯರ್ಥಿ ತಮ್ಮ ಕೋಮಿನ ಜನರಿಂದಲೇ ಶೇಕಡಾ ೫೧ರಷ್ಟು ಮತಗಳನ್ನು ಪಡೆದಿರಬೇಕು. ಇದರ ಪರಿಣಾಮ ಚುನಾಯಿತರಾದ ಮುಸ್ಲಿಮ್ ಸದಸ್ಯರಲ್ಲಿ ಬಹುತೇಕ ಮಂದಿ ಇತ್ತೆಹಾದ್‌ಗೆ ಸೇರಿದವರಾಗಿದ್ದರು. ಇದರಿಂದ ಮಿರ್ಜಾ ಅವರು ರಾಜ್ಯಾಂಗದ ರಚನೆ ಸಭೆಗೆ ಕಾಂಗ್ರೆಸ್ಸಿಗರನ್ನು ಆಹ್ವಾನಿಸಿ ರಾಜ್ಯಾಂಗದ ರಚನೆಯಲ್ಲಿ ಭಾಗವಹಿಸಲಿ ಎಂದು ಚುನಾಯಿತ ಮುಸ್ಲಿಮ್ ಪ್ರತಿನಿಧಿಗಳಿಗೆ ಕೇಳಿದರು. ಇದರಿಂದ ಕೆರಳಿ ಕೆಂಡಮಂಡಲವಾದ ರಜಾಕಾರರು ಮಿರ್ಜಾ ಅವರು ಕಾಂಗ್ರೆಸ್ಸಿನ ನಾಯಕರಂತೆ ವರ್ತಿಸುತ್ತಿದ್ದಾರೆ. ಕಾಂಗ್ರೆಸ್ಸಿನ ಜೊತೆ ಇವರಿಗೆ ಸಂಬಂಧವಿದೆ, ಕಾಂಗ್ರೆಸ್ಸಿನ ಜೊತೆ ಒಪ್ಪಂದ ಮಾಡಿಕೊಂಡು ಹೈದರಾಬಾದಿನ ಪ್ರಧಾನಿಯಾಗಿದ್ದಾರೆ ಎಂದೆಲ್ಲಾ ಟೀಕಿಸಿದರು.

''ಮಿರ್ಜಾ ಅವರು ಕಾರಿಡಾರ್‌ಗಳಲ್ಲಿ ಕಾಂಗ್ರೆಸ್ ಸದಸ್ಯರ ಜೊತೆಯಲ್ಲಿ ಅಡ್ಡಾಡುತ್ತಾ ಒಬ್ಬ ಹಿಂದೂವಿನಂತೆ, ಅವರಿಗೆ ಕೈ ಜೋಡಿಸಿ ನಮಸ್ಕರಿಸುತ್ತಾರೆ. ಕೆಲವು ಬಾರಿ ಅವರು 'ನಮಸ್ತೆ' ಅಥವಾ 'ನಮಸ್ಕಾರ' ಎಂದು ಹೇಳುತ್ತಿದ್ದುದು ಸಹ ಕೇಳಿ ಬಂದಿದೆ. ಕಾಂಗ್ರೆಸ್ಸಿನ ರಾಷ್ಟ್ರನಾಯಕರ ಜೊತೆ ಸಂಪರ್ಕ ದಲ್ಲಿದ್ದಾರೆ. ಇಲ್ಲಿನ ಪರಿಸ್ಥಿತಿಯ ಬಗ್ಗೆ ಕಾಂಗ್ರೆಸಿನ ನಾಯಕರಿಗೆ ತಿಳಿಸುತ್ತಾರೆ. ಹಿಂದೂಗಳು ಭಾರಿ ಸಂಖ್ಯೆಯಲ್ಲಿರುವುದರಿಂದ, ಎಷ್ಟೇ ತೊಂದರೆಗಳನ್ನು ಅನುಭವಿಸಬೇಕಾಗಿ ಬಂದರೂ ದೂರದ ಭವಿಷ್ಯದಲ್ಲಿ

ಅವರೇ ಆಳ್ವಿಕೆ ನಡೆಸುವರೆಂದು ಸರ್.ಮಿರ್ಜಾ ಹೇಳಿದರೆಂದು ಸಹ ಶಂಕಿಸಲಾಗಿದೆ." ಆದ್ದರಿಂದ ಮಿರ್ಜಾ ಅವರನ್ನು ಹೈದರಾಬಾದಿನಿಂದ ಓಡಿಸಿಬಿಡುವಂತೆ ರಜ್ವಿ ನಿಜಾಮರಲ್ಲಿ ವಿನಂತಿಸುತ್ತಿದ್ದಾಗ ಅಧಿಕಾರಿಗಳು ರಜ್ವಿಗೆ ಬೆಂಬಲ ನೀಡುತ್ತಿದ್ದರು. ಇನ್ನೂ ಕೆಲವು ಮಿರ್ಜಾರ ನಿಷ್ಠಾವಂತ ಅಧಿಕಾರಿಗಳೂ ಇದನ್ನು ಅರಿತುಕೊಂಡು, ಮಿರ್ಜಾ ಅವರು ಹೈದರಾಬಾದಿನಲ್ಲಿ ಇರುವುದು ಸೂಕ್ತವಲ್ಲ. ಇಲ್ಲಿ ಇರುವುದರಿಂದ ಅವರ ಪ್ರಾಣಕ್ಕೆ ಅಪಾಯವಿದೆ ಎಂದು ಮಿರ್ಜಾ ಅವರಿಗೆ ಹೇಳಿದರು. ಇದನ್ನೆಲ್ಲಾ ಸೂಕ್ಷ್ಮವಾಗಿ ಅವಲೋಕಿಸಿದ ಮಿರ್ಜಾ ಈ ಬೆಳವಣಿಗೆಯಿಂದ ನೊಂದುಕೊಂಡು ತಾವು ಹೈದರಾಬಾದ್ ಸಂಸ್ಥಾನವನ್ನು ಬಿಟ್ಟು ಹೋಗುವುದೇ ವಾಸಿ ಎಂದು ತಿಳಿದು ನಿಜಾಮರಿಗೆ ಕೆಲವು ದಿನ ನಾನು ಬೆಂಗಳೂರಿಗೆ ಹೋಗುವೆನೆಂದು ಹೇಳಿ ಬೆಂಗಳೂರಿಗೆ ಬಂದರು.[೬]

## ೭.೩. ಆಂತರಿಕ ಒತ್ತಡಗಳು

ಮಿರ್ಜಾ ಅವರು ನಿಜಾಮರ ಮಾತಿಗೆ ಮಾನ್ಯತೆ ಕೊಟ್ಟು ಹೈದರಾಬಾದಿನ ದಿವಾನರಾಗಿ ಅಧಿಕಾರವನ್ನು ವಹಿಸಿಕೊಂಡಿದ್ದರು. ಇದರಿಂದ ನಿಜಾಮರಿಗೆ ತಮ್ಮ ಸಂಸ್ಥಾನದಲ್ಲಿದ್ದ ಆಂತರಿಕ ಸಮಸ್ಯೆಗಳಿಗೆ ಮಿರ್ಜಾ ತಮ್ಮ ಜಾಣ್ಮೆ, ದಕ್ಷತೆ, ಪ್ರಾಮಾಣಿಕತೆಯಿಂದ ಸಮಸ್ಯೆಗಳನ್ನು ಪರಿಹರಿಸುತ್ತಾರೆ. ವಿವಿಧ ಭಾಷೆಗಳು ಬಲ್ಲವರಾಗಿದ್ದರಿಂದ ಬ್ರಿಟಿಶರ ಜೊತೆ ಕೂಡ ಉತ್ತಮ ರೀತಿಯಲ್ಲಿ ವ್ಯವಹರಿಸುತ್ತಾರೆ ಎಂದು ಭಾವಿಸಿದರು. ಆದರೆ ಮುಂದೆ ನಿಜಾಮರು ಮುಸ್ಲಿಂ ನಾಯಕ ಕಾಸಿಂ ರಜ್ವಿಯ ಮಾತು ಕೇಳಿ ರಜಾಕಾರರಿಗೆ ಸಂಪೂರ್ಣ ಸ್ವಾತಂತ್ರ್ಯ ನೀಡಿದರು. ಈ ಸ್ವಾತಂತ್ರ್ಯವನ್ನು ದುರುಪಯೋಗ ಮಾಡಿಕೊಂಡ ರಜ್ವಿ ತನ್ನ ನೇತೃತ್ವದಲ್ಲಿ ಒಂದು ಪ್ರಬಲವಾದ ರಜಾಕಾರರ ಸ್ವಯಂಸೇವಕರ ಗುಂಪನ್ನು ಕಟ್ಟಿಕೊಂಡು ಹೈದರಾಬಾದ್ ಸಂಸ್ಥಾನದ ಆಡಳಿತದಲ್ಲಿ ಹಸ್ತಕ್ಷೇಪ ಮಾಡಲು ಪ್ರಾರಂಭಿಸಿದನು. ಇದು ಮಿರ್ಜಾ ಅವರಿಗೆ ಸರಿಬರಲಿಲ್ಲ. ಇದರಿಂದ ಮನಸ್ತಾಪವಾಗಿ ಇವರ ಬಗ್ಗೆ ಇಲ್ಲಸಲ್ಲದನ್ನು ನಿಜಾಮರಿಗೆ ಹೇಳಿ ಅವರು ಒಪ್ಪುವಂತೆ ಮಾಡಿ ನಿಜಾಮ ಮತ್ತು ಮಿರ್ಜಾ ಅವರ ಮಧ್ಯ ವೈಮನಸ್ಸು ಹುಟ್ಟಿಸಿದನು. ರಜಾಕಾರರ ಮಾತಿನಂತೆ ನಿಜಾಮನು ನಂಬಿ ದಿವಾನ ಮಿರ್ಜಾ ಅವರ ಮೇಲಿದ್ದ ವಿಶ್ವಾಸವನ್ನು ಕಳೆದುಕೊಂಡು ಆಡಳಿತದಲ್ಲಿ ಸಹಾಯ ಮಾಡದೆ ಅವರಿಗೆ ಅವಿಶ್ವಾಸದಿಂದ ನೋಡಲು ಪ್ರಾರಂಭಿಸಿದನು. ಇದರ ಲಾಭವನ್ನು ಪಡೆದು ಕಾಸಿಂ ರಜ್ವಿಯು ರಾಜ್ಯದ ಮೇಲೆ ಸಂಪೂರ್ಣವಾದ ಹಿಡಿತವನ್ನು ಸಾಧಿಸಲು ಪ್ರಯತ್ನಿಸಿದನು. ಹಿಂದೂಗಳಿಗೆ ಯಾವುದೇ ಸ್ಥಾನಮಾನ ಕೊಡಬಾರದು. ಎಲ್ಲಾ ಪ್ರಮುಖ ಹುದ್ದೆಗಳನ್ನು ಮುಸ್ಲಿಮರಿಗೆ ನೀಡಬೇಕು ಎಂದು ಪ್ರತಿಪಾದಿಸಿ ಮುಸ್ಲಿಮರ ಹತ್ತಿರ ವಿಶ್ವಾಸವನ್ನು ಗಳಿಸಿ ಮಿರ್ಜಾ ಅವರ ವಿರುದ್ಧ ಸಮರ ಸಾರುವುದಕ್ಕೆ ವೇದಿಕೆ ಮಾಡಿಕೊಂಡಿದ್ದನು. ಇದನ್ನು ಸೂಕ್ಷ್ಮವಾಗಿ ಅವಲೋಕಿಸಿದ ಮಿರ್ಜಾ ಅವರು ನಿಜಾಮರಿಗೆ ಈ ಎಲ್ಲ ಬೆಳವಣಿಗೆಗಳನ್ನು ತಿಳಿಸಿದರೂ ಅದರಿಂದ ಯಾವುದೇ ಪ್ರಯೋಜನವಾಗಲಿಲ್ಲ. ದಿವಾನ ಮಿರ್ಜಾ ಅವರ ಕಾರ್ಯವೈಖರಿ ಈ ವೇಳೆಗೆ ಸರ್ಕಾರವನ್ನು

ನಿಯಂತ್ರಿಸುವುದಾಗಿತ್ತು. ಇತ್ತೆಹಾದ್‌ಗೆ ಇದು ಸರಿಕಾಣಲಿಲ್ಲ. ಅವರು ಸಾರ್ವಜನಿಕರನ್ನು ಸಂಪರ್ಕಿಸುವುದು, ಕಾಂಗ್ರೆಸ್ಸಿಗರನ್ನು ಭೇಟಿ ಮಾಡುವುದು, ಅವರನ್ನು ಗೌರವದಿಂದ ಕಾಣುವುದು ದೇಶ ದ್ರೋಹ ಎಂಬ ರೀತಿಯಲ್ಲಿ ವರ್ತಿಸಿದರು.

ಹೈದರಾಬಾದ್‌ನಲ್ಲಿ ಅದರಲ್ಲೂ ಗಡಿ ಪ್ರದೇಶದಲ್ಲಿ ರಜಾಕಾರರ ದೌರ್ಜನ್ಯ ಅವ್ಯಾಹತವಾಗಿ ನಡೆಯುತ್ತಿತ್ತು. ಮಿರ್ಜಾ ನಿಷ್ಪಕ್ಷಪಾತವಾಗಿ ಕಾನೂನಿನನ್ವಯ ಆಳ್ವಿಕೆ ನಡೆಸಿದರೆ ರಜಾಕಾರರ ಚಟುವಟಿಕೆಗಳು ನಿಲ್ಲಬೇಕಾಗುತ್ತಿತ್ತು. ಹೈದರಾಬಾದ್‌ನ ಮಜ್ಲಿಸ್ ಸದಸ್ಯರಿಗೂ ಮಿರ್ಜಾ ಎಂ ಇಸ್ಮಾಯಿಲ್ ಅವರ ದಕ್ಷತೆ ನಿಷ್ಪಕ್ಷಪಾತ ದೃಷ್ಟಿ ಬೇಡವೆನಿಸಿದ್ದಿತು. ನಿಜಾಮನಿಗೆ ತನ್ನ ಸಾಮ್ರಾಜ್ಯ ವಿಸ್ತರಸಣೆ ಮುಖ್ಯವಾಗಿತ್ತೇ ವಿನಾ ಜನರ ಹಿತ ಮುಖ್ಯವಾಗಿರಲಿಲ್ಲ.

ಎಲ್ಲಕ್ಕೂ ಮಿಗಿಲಾಗಿ ೧೯೪೭ರ ವೇಳೆಗೆ ಕಾಸಿಂ ರಜ್ವಿ ಹೈದರಾಬಾದಿನ ಸರ್ವಾಧಿಕಾರಿಯಾಗಿದ್ದನು. ಪ್ರತಿಯೊಂದು ಕೆಲಸವೂ ಅವನ ಅನುಮತಿಯಂತೆ ನಡೆಯಬೇಕಾಗಿದ್ದಿತು. ರಾಜ್ಯಾಂಗ ಸುಧಾರಣೆ ವಿಷಯದಲ್ಲಿ ಇತ್ತೆಹಾದ್ ಸಮಿತಿ ಸಲಹೆಯಾದ ೫೦:೫೦ರ ಅನುಪಾತ ಹಾಗೂ ಗ್ರಾಮ ಪಂಚಾಯಿತಿ ವ್ಯವಸ್ಥೆಯನ್ನು ವಿರೋಧಿಸಿತು. ಮಿರ್ಜಾ ಎಂ ಇಸ್ಮಾಯಿಲ್ ಅವರು ದಿವಾನರಾದ ನಂತರ ಮಜ್ಲಿಸ್‌ಗೆ ಚುನಾವಣೆ ನಡೆಯಿತು. ಅದರಲ್ಲಿ ಮುಸ್ಲಿಮರು ೪೪ ಸ್ಥಾನಗಳಲ್ಲಿ ೪೨ ಸ್ಥಾನ ಪಡೆದು ಭಾರಿ ಬಹುಮತದಿಂದ ಗೆದ್ದು ಬಂದರು. ಮಿರ್ಜಾ ಅವರು ಸಂಸ್ಥಾನದ ೮೫ ಜನಸಂಖ್ಯೆಯಿದ್ದ ಹಿಂದೂಗಳ ಸಹ ಶಾಸಕಾಂಗದಲ್ಲಿ ಪಾತ್ರ ವಹಿಸಬೇಕೆಂದೂ, ಹಿಂದೂಗಳಿಗೂ ಮಂತ್ರಿ ಪದವಿ ದೊರಕಬೇಕೆಂದೂ ಸಲಹೆ ಮಾಡಿದರು. ಆದರೆ ಮಜ್ಲಿಸ್ ಅದನ್ನು ವಿರೋಧಿಸಿತು. ಮಿರ್ಜಾ ಅವರ ಧರ್ಮನಿರಪೇಕ್ಷಿತ ನೀತಿಗೆ ನಿಜಾಮ ರಾಜ್ಯದಲ್ಲಿ ಸ್ಥಾನವಿರಲಿಲ್ಲ. ಈ ನೀತಿಯು ರಜಾಕಾರರನ್ನು ಮತ್ತಷ್ಟು ಕೇರಳಿಸಿತು.[೮]

ಮಿರ್ಜಾ ಅವರು ಜಾರಿಗೆ ತರಬೇಕೆಂದ ಕಾಯ್ದೆಗಳು, ಅಭಿವೃದ್ಧಿ ತಂತ್ರಗಳು ಇವು ರಜಾಕಾರರಿಗೆ ವಿರುದ್ಧವಾಗಿದ್ದವು. ಹೈದರಾಬಾದ್‌ನಲ್ಲಿದ್ದ ಪೊಲೀಸ್ ಪಡೆಗಳಲ್ಲಿ ಹಿಂದೂಗಳಿಗೂ ಶೇ.೨೫ರಷ್ಟು ಅವಕಾಶ ಕೊಡಬೇಕೆಂದು ಪ್ರತಿಪಾದಿಸಿದ್ದರಿಂದ ನಿಜಾಮರು ಮತ್ತು ರಜಾಕಾರರು ಇದಕ್ಕೆ ಅವಕಾಶ ಕೊಡಲಿಲ್ಲ. ಈ ವಿಷಯದಿಂದ ರಜಾಕಾರರಿಗೆ ಮಿರ್ಜಾ ಅವರ ಮೇಲೆ ಕೋಪ ಬಂದಿತ್ತು. ಇದು ಹೈದರಾಬಾದ್ ರಾಜ್ಯಕ್ಕೆ ಒಂದು ದ್ರೋಹದ ವಿಚಾರವಾಗಿದೆ ಎಂದು ನಿಜಾಮರು ಭಾವಿಸಿದರು.[೯] ಈ ರೀತಿಯಾಗಿ ಅಭಿವೃದ್ಧಿ ಕಾರ್ಯಗಳಿಗೆ ಅಡ್ಡಗಾಲು ಹಾಕುವುದು ಇವರ ಪರಮ ಕೆಲಸವಾಯಿತು. ರಾಜ್ಯದ ಆಳ್ವಿಕೆಯಲ್ಲಿ ನಿಜಾಮರು ಮತ್ತು ರಜಾಕಾರರು ಮಿರ್ಜಾರಿಗೆ ಸರಿಯಾಗಿ ನೆರವು ನೀಡಲಿಲ್ಲ. ಕೆಲವು ಅಧಿಕಾರಿಗಳು ಕೂಡ ಸಹಕರಿಸಲಿಲ್ಲ. ರಜಾಕಾರರು ಕೂಡ ಮಿರ್ಜಾ ಅವರಿಗೆ ಹೈದರಾಬಾದ್ ರಾಜ್ಯದಿಂದ ಓಡಿಸಬೇಕು ಎಂದು ಚುಚ್ಚು ಮಾತಿನಿಂದ ನಿಂದಿಸಲು ಪ್ರಾರಂಭಿಸಿದರು. ಬೀದಿ ಬೀದಿಯಲ್ಲಿ ಅವರ

ವಿರುದ್ಧವಾಗಿ ಅಪಪ್ರಚಾರ ಮಾಡುತ್ತಿದ್ದರು. ಇವೆಲ್ಲವನ್ನು ನೋಡಿ ಕೊನೆಗೆ ಮಿರ್ಜಾ ಅವರು ಮನನೊಂದು ರಾಜೀನಾಮೆ ನೀಡಿದರು.[೧೧]

## ೭.೪. ರಾಜೀನಾಮೆ ನಿರ್ಧಾರ

ಮಿರ್ಜಾ ಎಂ ಇಸ್ಮಾಯಿಲ್ ಅವರು ಹೈದರಾಬಾದಿನ ಜನರ ಮನಸ್ಸನ್ನು ಗೆದ್ದಿದ್ದರು. ಆದರೆ ರಜಾಕಾರರ ಮತ್ತು ನಿಜಾಮರ ಮನಸ್ಸು ಗೆಲ್ಲುವಲ್ಲಿ ವಿಫಲರಾಗಿದ್ದರು. ಹೈದರಾಬಾದ್ ಸಂಸ್ಥಾನವು ಕೂಡ ಮೈಸೂರು, ಜಯಪುರ ಸಂಸ್ಥಾನಗಳ ಹಾಗೇ ಅಭಿವೃದ್ಧಿಯನ್ನು ಕಾಣಬೇಕು ಎಂಬ ಭಾವನೆಯಿಂದ ಅತಿಯಾದ ಆಸೆಯನ್ನು ಇಟ್ಟುಕೊಂಡು ಮಿರ್ಜಾ ಹೈದರಾಬಾದಿಗೆ ಬಂದಿದ್ದರು. ಆದರೆ ಅವರ ಆಸೆಯು ಆಸೆಯಾಗಿಯೇ ಉಳಿಯಿತು. ಮೊದ ಮೊದಲು ನಿಜಾಮರು ಕೂಡ ಮಿರ್ಜಾ ಅವರ ಬಗ್ಗೆ ಅತಿ ಗೌರವ, ವಿಶ್ವಾಸ ಹೊಂದಿದ್ದರು. ಅಷ್ಟೇ ಅಲ್ಲ, ಇಂತಹ ದಿವಾನರು ನಮ್ಮಂತಹ ದೊಡ್ಡ ಸಂಸ್ಥಾನದಲ್ಲಿ ಕೆಲಸ ಮಾಡಿದರೆ ಸಂಸ್ಥಾನದ ಏಳಿಗೆಯಾಗುತ್ತದೆ ಎಂದು ತಿಳಿದು ಅವರ ಸೇವೆಯನ್ನು ಪಡೆಯಲು ನಿಜಾಮರು ಪತ್ರ ವ್ಯವಹಾರಗಳ ಮೂಲಕ ಕೇಳಿಕೊಂಡರು. ಕೊನೆಗೂ ಮಿರ್ಜಾ ಅವರು ದಿವಾನರಾಗಲು ಒಪ್ಪಿದ ಮೇಲೆ ನಿಜಾಮರ ಆಸೆಯು ಈಡೇರಿದಂತಾಯಿತು. ಆಹ್ವಾನದ ಮೇರೆಗೆ ದಿವಾನರಾಗಿ ಅಧಿಕಾರ ಸ್ವೀಕರಿಸಿ ಅಭಿವೃದ್ಧಿಗೋಸ್ಕರ ಹೊಸ ಹೊಸ ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತಾ ಅಭಿವೃದ್ಧಿಯತ್ತ ಮುಂದೆ ಸಾಗಿದ್ದರು. ಇವರ ಸಾಧನೆಯನ್ನು ಸಹಿಸದೆ ರಜಾಕಾರರು ಕಾಸಿಂ ರಜ್ವಿಯ ನೇತೃತ್ವದಲ್ಲಿ ಇವರ ಸಾಧನೆಯನ್ನು ಸಹಿಸದೆ ಅಭಿವೃದ್ಧಿಯನ್ನು ವಿರೋಧಿಸಲು ಪ್ರಾರಂಭಿಸಿದರು. ಇಂತಹ ಸಂದರ್ಭದಲ್ಲಿ ನಿಜಾಮರು ರಜಾಕಾರರ ಮೇಲೆ ಯಾವುದೇ ಕ್ರಮವನ್ನು ಕೈಗೊಳ್ಳದೆ ಮೌನವಾಗಿ ಉಳಿದರು. ಇದರಿಂದ ಮತ್ತಷ್ಟು ಪ್ರಬಲವಾಗುತ್ತಾ ಕಾಸಿಂ ರಜ್ವಿ ರಜಾಕಾರರೆಂಬ ಸ್ವಯಂಸೇವಕ ಗುಂಪನ್ನು ಕಟ್ಟಿಕೊಂಡು ಅದರ ಸಹಾಯದಿಂದ ಒಂದು ಸಮಾನಾಂತರವಾದ ಸರ್ಕಾರವನ್ನು ಸ್ಥಾಪಿಸಿದನು. ಸಂಸ್ಥಾನದ ಸಾರ್ವಭೌಮತ್ವ ರಜ್ವಿ ಅಧೀನದಲ್ಲಿದ್ದ ಇತ್ತೇಹಾದ್ ಕೈಯಲ್ಲಿದೆ, ನಿಜಾಮನ ಕೈಯಲಿಲ್ಲ ಎಂದು ಸಾರಿದ. ರಜ್ವಿ ಈ ಇತ್ತೇಹಾದ್ ಸಂಸ್ಥೆ ದಖನ್ನಿನ ಸಾರ್ವಭೌಮ ಶಕ್ತಿಯನ್ನು ನಿರೂಪಿಸಿದ್ದನ್ನು, ಆಡಳಿತದಲ್ಲಿ ಬಹುದಿನಗಳಿಂದ ಅವರು ಅಪೇಕ್ಷಿಸುತ್ತಿದ್ದ ಸುಧಾರಣೆಗಳನ್ನು ಜಾರಿಗೆ ತರುವುದನ್ನು ಬಿಟ್ಟು ಮುಸ್ಲಿಂ ರಾಜ್ಯದ ಪ್ರಮುಖ ಶಕ್ತಿ ಎಂದು ಸಾರಿದನು. ಇದರಿಂದ ರಾಜ್ಯದ ಅಭಿವೃದ್ಧಿ ಕೆಲಸಗಳು ಆಗದೆ ಆಡಳಿತ ಯಂತ್ರ ಕುಸಿಯಲಾರಂಭಿಸಿತು.

ರಜ್ವಿ ನಾಯಕತ್ವದಲ್ಲಿ ರಜಾಕಾರರು ಬಹುಬೇಗ ಉಗ್ರಗಾಮಿ ಗುಂಪಾಗಿ ಹಿಂಸಾಚಾರಗಳನ್ನು ಕೈಗೊಂಡಾಗ ನಿಜಾಮ ಮೂಕಪ್ರೇಕ್ಷಕನಾಗಿ ನಿಸ್ಸಹಾಯಕನಾಗಿ ನಿಂತನು. ಈ ಸಂದರ್ಭದಲ್ಲಿ ಹೈದರಾಬಾದ್ ಸಂಸ್ಥಾನದ ಕಾಂಗ್ರೆಸ್ ಸಂಸ್ಥೆ ಸ್ವತಂತ್ರ ಚಳುವಳಿಯಲ್ಲಿ ಭಾಗವಹಿಸುತ್ತಿತ್ತು. ನಿಜಾಮ ಸರ್ಕಾರ ಕಾಂಗ್ರೆಸ್ ಚಟುವಟಿಕೆಗಳನ್ನು ಉಗ್ರವಾಗಿ ಅಡಗಿಸಿತು. ಹೈದರಾಬಾದ್ ಸಂಸ್ಥಾನವು ಮುಸ್ಲಿಂ ಲೀಗ್‌ನೊಂದಿಗೆ

ಸಂಪರ್ಕವನ್ನಿಟ್ಟುಕೊಂಡಿದ್ದು, ಪ್ರಮುಖ ರಾಜಕೀಯ ವಿದ್ಯಮಾನಗಳ ಬಗ್ಗೆ ಮಹಮದ್ ಅಲಿ ಜಿನ್ನಾ ಅವರ ಸಲಹೆಯನ್ನು ಪಡೆಯುತ್ತಿತ್ತು. ಮಿರ್ಜಾ ಅವರು ಪ್ರತಿಯೊಂದು ವಿಷಯವನ್ನು ಟೀಕಾತ್ಮವಾಗಿ ನೋಡುತ್ತಿದ್ದ ರಜಾಕಾರರಿಂದ ಅನೇಕ ತೊಂದರೆಗಳನ್ನು ಅನುಭವಿಸಬೇಕಾಯಿತು. ರಜಾಕಾರರು ಆಡಳಿತದಲ್ಲಿ ಸಹಾಯ ಸಹಕಾರ ನೀಡದೆ ಮಾಡುವ ಕೆಲಸಗಳನ್ನು ಆಗದ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದರು. ಮಿರ್ಜಾ ಅವರ ವಿರುದ್ಧ ಅಪಪ್ರಚಾರ ಮಾಡುತ್ತ ಮುಸ್ಲಿಂ ವಿರೋಧಿ ಎಂದು ಪ್ರಚಾರ ಮಾಡಿದರು. ಮುಸ್ಲಿಂ ಸಮುದಾಯಕ್ಕೆ ಅಪಮಾನ ಆಗುವ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದಾರೆ ಎಂದು ಆರೋಪಿಸಿದರು. ಹಿಂದೂಗಳನ್ನು ಕಂಡರೆ ಅವರಿಗೆ ನಮಸ್ಕಾರ ಹೇಳುತ್ತಾರೆ. ಇದು ಮುಸ್ಲಿಮರಿಗೆ ಮಾಡುವ ಒಂದು ದೊಡ್ಡ ದ್ರೋಹ ಎಂದು ಆರೋಪಿಸಿದರು.[೧೧]

ಮಿರ್ಜಾ ಅವರು ಇವೆಲ್ಲಾ ಆರೋಪಗಳಿಗೆ ಕಿವಿಗೊಡದೆ ತಮ್ಮ ಕೆಲಸದಲ್ಲಿ ತಲ್ಲೀನರಾದರೂ ಕೂಡ ರಜಾಕಾರರು ಕಾಂಗ್ರೆಸ್ಸಿನ ಜೊತೆ ಉತ್ತಮವಾದ ಸಂಬಂಧವಿದೆ, ಇವರು ಕಾಂಗ್ರೆಸಿಗೆ ಸಹಾಯ ಮಾಡಲು ದಿವಾನರಾಗಿ ಹೈದರಾಬಾದಿಗೆ ಬಂದಿದ್ದಾರೆ ಎಂದು ಹೇಳುತ್ತಾ ಮುಸ್ಲಿಂ ಜನರ ಹತ್ತಿರ ಇವರ ಘನತೆ ಗೌರವಕ್ಕೆ ಧಕ್ಕೆ ಬರುವಂತೆ ಹೇಳುತ್ತಿದ್ದರು. ಮಿರ್ಜಾ ರಜಾಕಾರರಿಗೆ ದೊಡ್ಡ ತಡೆಯಾಗಿದ್ದರು. ಆದ್ದರಿಂದ ಅವರನ್ನು ಹೈದರಾಬಾದಿನಿಂದ ಓಡಿಸಬೇಕೆಂದು ರಜಾಕರರು ನಿರ್ಧರಿಸಿದರು. ರಾಜ್ಯದಲ್ಲೆಲ್ಲಾ 'ಮಿರ್ಜಾ ಮುರ್ದಾಬಾದ್', 'ಮಡಿಯಲಿ ಮಿರ್ಜಾ' ಎಂದು ಹುಚ್ಚು ಹುಚ್ಚಾಗಿ ಕೂಗುತ್ತಾ ಬೀದಿ ಬೀದಿಗಳಲ್ಲಿ ರಜಾಕಾರರು ಶಸ್ತ್ರಗಳನ್ನು ಹಿಡಿದು ಅಲೆದಾಡುತ್ತಿದ್ದರು.

ರಜ್ವಿಯು ಇಲ್ಲಸಲ್ಲದ ಆರೋಪ ಮಾಡುತ್ತಾ ಮಿರ್ಜಾ ಹಿಂದೂ ಪಕ್ಷಪಾತಿ. ಇದು ಮಹಮ್ಮದಿಯರಿಗೆ ಅಪಮಾನಕರ. ಹಿಂದೂಗಳೇ ಬಹುಸಂಖ್ಯಾತರಾಗಿರುವ ಹೈದರಾಬಾದನ್ನು ಇಂದಿಲ್ಲ ನಾಳೆಯಾದರೂ ಹಿಂದೂಗಳೇ ಆಳುವುದು ಖಂಡಿತ ಎಂದು ಪ್ರಚಾರ ಮಾಡುತ್ತಿದ್ದಾರೆ. ಇವರು ಮುಸಲ್ಮಾನರೆ? ಆದ್ದರಿಂದ ಮಿರ್ಜಾ ಅವರನ್ನು ಹೈದರಾಬಾದಿನಿಂದ ಬಿಡಿಸಿ ಬಿಡುವಂತೆ ರಜ್ವಿ ನಿಜಾಮರಲ್ಲಿ ವಿನಂತಿಸಿದ್ದರು. ಇನ್ನೂ ಕೆಲವು ಅಧಿಕಾರಿಗಳು ಕೂಡ ಅದೇ ರೀತಿಯಾಗಿ ಆರೋಪಿಸಿದ್ದರು. ಈ ಎಲ್ಲಾ ಅಧಿಕಾರಿಗಳ ಮತ್ತು ರಜಾಕಾರರ ಮಾತು ಕೇಳಿದ ನಿಜಾಮನು ಸತ್ಯಾಸತ್ಯತೆಯನ್ನು ಕಂಡುಕೊಳ್ಳದೆ ಮಿರ್ಜಾ ಅವರನ್ನು ಅನುಮಾನದಿಂದ ನೋಡಲು ಪ್ರಾರಂಭಿಸಿದನು. ಇದರಿಂದ ರಜಾಕಾರರಿಗೆ ಆರೋಪಿಸಲು ಮತ್ತಷ್ಟು ಅನುವು ಮಾಡಿಕೊಟ್ಟಂತಾಯಿತು. ಕೆಲವು ತನ್ನ ಹಿತೈಷಿ ಅಧಿಕಾರಿಗಳ ಮಾತನ್ನು ಕೇಳುತ್ತಾ ನಾನು ಇನ್ನೂ ಹೈದರಾಬಾದ್‌ನಲ್ಲಿ ಇರುವುದು ಮೂರ್ಖತನದ ವಿಚಾರವೆಂದು ತಿಳಿದು, ಮಿರ್ಜಾ ನಿಜಾಮರಿಗೆ ಪತ್ರ ಬರೆದು ಬೆಂಗಳೂರಿಗೆ ಬೇಸಿಗೆ ವಿಶ್ರಾಂತಿಗಾಗಿ ಹೋಗುವುದಾಗಿ ಹೇಳಿ, ಬೆಂಗಳೂರಿಗೆ ಹೋದರು.

ವಿಶ್ರಾಂತಿಗಾಗಿ ಬೆಂಗಳೂರಿಗೆ ಬಂದಿದ್ದ ಮಿರ್ಜಾ ಅವರು ಮತ್ತೆ ತಿರುಗಿ ಹೈದರಾಬಾದಿಗೆ ಹೋಗುವಾಗ ಯಾವ ಆಲೋಚನೆಯನ್ನು ಕೂಡ ಮಾಡದೇ ನಿಜಾಮರಿಗೆ ಪತ್ರ ಬರೆದು ನನ್ನನ್ನು ನಿಮ್ಮ ಸಂಸ್ಥಾನದಿಂದ ನಿವೃತ್ತಿಗೊಳಿಸಿ ಎಂದು ೧೯೪೭ ಮೇ ೧೫ರಂದು ಕೇಳಿಕೊಂಡರು.[೧೨]

## ೭.೫. ರಾಜೀನಾಮೆಗೆ ಪ್ರತಿಕ್ರಿಯೆ

ಹೈದರಾಬಾದ್‌ನ ನಿಜಾಮರ ಆಹ್ವಾನದ ಮೇರೆಗೆ ದಿವಾನರಾಗಿ ಅಧಿಕಾರವನ್ನು ವಹಿಸಿಕೊಂಡು ಮೈಸೂರು, ಜಯಪುರ ಸಂಸ್ಥಾನದ ಮಾದರಿಯಲ್ಲಿ ಹೈದರಾಬಾದನ್ನು ಅಭಿವೃದ್ಧಿ ಮಾಡಬೇಕೆಂದು ಅಭಿಲಾಷೆಯನ್ನು ಇಟ್ಟುಕೊಂಡು ಅಧಿಕಾರವನ್ನು ಸ್ವೀಕರಿಸಿದರೂ, ಮುಂದೆ ಬರಬರುತ್ತಾ ನಿಜಾಮರ ಮತ್ತು ಮಿರ್ಜಾ ಅವರ ನಡುವೆ ಮನಸ್ತಾಪ ಬರುವಂತೆ ರಜಾಕಾರರು ಮಾಡಿದ ಸುಳ್ಳಿನ ಆರೋಪದಿಂದ ನಿಜಾಮರು ಸುಳ್ಳನ್ನೇ ನಂಬಿ ಮಿರ್ಜಾ ಅವರ ಮೇಲಿನ ನಂಬಿಕೆ, ವಿಶ್ವಾಸವನ್ನು ಮರೆತುಬಿಟ್ಟರು. ಹೀಗೆ ದಿನೇ ದಿನೇ ರಜಾಕಾರರು ಬೆಳೆಯುತ್ತಾ ಸಂಸ್ಥಾನದಲ್ಲಿ ಪ್ರಬಲರಾದರು. ಇಷ್ಟೆಲ್ಲಾ ವಿಷಯಗಳಿಂದ ಮನನೊಂದು ಮಿರ್ಜಾ ತಮ್ಮ ಹುದ್ದೆಗೆ ರಾಜೀನಾಮೆಯನ್ನು ನೀಡಿದರು.[೧೩]

ಮಿರ್ಜಾ ಅವರು ರಜಾಕಾರರನ್ನು ಕುರಿತು ಹೇಳುತ್ತಾ ''ರಜಾಕಾರರು ತಮ್ಮ ಸ್ವಾರ್ಥತೆಗಾಗಿ ಇಡೀ ರಾಜ್ಯವನ್ನೇ ಬಲಿ ಕೊಡಲು ಮುಂದಾಗಿದ್ದಾರೆ. ಜಾತಿ, ಧರ್ಮದ ಹೆಸರಿನಲ್ಲಿ ಜನರ ಮನಸ್ಸನ್ನು ಕದಡಿಸುವ ಕೆಲಸಕ್ಕೆ ಕೈ ಹಾಕಿದ್ದಾರೆ. ಇಂತಹ ಬೆಳವಣಿಗೆ ನನ್ನ ಮನಸ್ಸಿಗೆ ತುಂಬಾ ನೋವು ಉಂಟು ಮಾಡಿದೆ. ರಜಾಕಾರರು ನನ್ನ ಆಡಳಿತದ ಅವಧಿಯಲ್ಲಿ ಯಾವುದೇ ತರಹದ ಸಹಾಯ ಸಹಕಾರವನ್ನು ನೀಡಲಿಲ್ಲ. ತಾವೂ ಕೂಡ ಸುಮ್ಮನೆ ಕೂಡದೆ ಪ್ರತಿ ಹೆಜ್ಜೆ ಹೆಜ್ಜೆಗೂ ನನ್ನನ್ನು ಕಷ್ಟಕ್ಕೆ ನೂಕುತ್ತಾ ಬಂದರು. ಇಂತಹ ಸಂಮಯದಲ್ಲಿ ಕೂಡ ನನ್ನ ಪ್ರೀತಿಯ ನಿಜಾಮರು ರಜಾಕಾರರ ಪರವಾಗಿ ಇದ್ದುಕೊಂಡು ಆಡಳಿತದಲ್ಲಿ ಬೆಂಬಲಿಸಲಿಲ್ಲ. ಹೀಗಾಗಿ ನಾನು ಇಟ್ಟುಕೊಂಡು ಬಂದಿದ್ದ ನನ್ನ ಕನಸು ಕನಸಾಗಿಯೇ ಉಳಿಯಿತು. ನಿಜಾಮರು ನನಗೆ ದಯಪಾಲಿಸಿದ ಈ ಅಧಿಕಾರಾವಧಿಯಲ್ಲಿಯೇ ಪ್ರಯತ್ನಪಟ್ಟು ಅಭಿವೃದ್ಧಿಯತ್ತ ತೆಗೆದುಕೊಂಡು ಬಂದಿದ್ದೇನೆ. ಮುಂದೆ ಕೂಡ ಯಾರೇ ದಿವಾನರಾಗಿ, ಅಧಿಕಾರಿಗಳಾಗಿ ಬಂದರೂ ನಿಜಾಮರಿಗೆ ಸಹಾಯ ಮಾಡಿ ಅಸಫಜಾ ಮನೆತನವನ್ನು ಚಿರಾಯುವಾಗುವಂತೆ ಮಾಡಲಿ ಎಂದು ಮನದಾಳದ ಮಾತು ವ್ಯಕ್ತಪಡಿಸಿದರು.[೧೪]

ರಾಜೀನಾಮೆ ನೀಡುವ ಕುರಿತು ಮಾತನಾಡುತ್ತಾ. ''ಬ್ರಿಟಿಶರ ನಿಯಂತ್ರಣ ಹೋದ ನಂತರ ನಿರೀಕ್ಷಿಸಿದ್ದಂತೆ ನಾನು ಅಧಿಕಾರದಲ್ಲಿರುವುದು ಅಸಾಧ್ಯವಾಯಿತು. ಏಕೆಂದರೆ ಭಾರತದಲ್ಲಿ ಸ್ವಾತಂತ್ರ್ಯ ಹೋರಾಟ ಜೋರಾಗಿದ್ದರಿಂದ ಸಮಸ್ಯೆಯನ್ನು ಸೂಕ್ಷ್ಮವಾಗಿ ಅವಲೋಕಿಸಿದ ಬ್ರಿಟಿಶರು ತಮ್ಮ ಅಧಿಕಾರವನ್ನು ಸೀಮಿತ ಮಾಡಿಕೊಂಡರು. ಇದರಿಂದ ಹೈದರಾಬಾದ್ ಸಂಸ್ಥಾನವು ಕೂಡ ಸ್ವಾತಂತ್ರ್ಯ ಪಡೆಯುತ್ತದೆ ಎಂದು ಭಾವಿಸಿಕೊಂಡಿದ್ದರು. ಬ್ರಿಟಿಶರ ನಿಯಂತ್ರಣ ಹೋದ ಮೇಲೆ ನಿಜಾಮರಲ್ಲಿ ಅನೇಕ ಬದಲಾವಣೆಗಳಾದವು. ತಾವು ಅನವಶ್ಯಕವಾಗಿದ್ದೇವೆ ಎನ್ನುವ ರೀತಿಯಲ್ಲಿ ನಿಜಾಮರ ವರ್ತನೆಗಳು ಕಂಡುಬಂದಿದ್ದವು. ಇದರಿಂದ ಪೂರ್ವ ಯೋಜನೆಯಂತೆ ರಾಜೀನಾಮೆ ಕೊಡುವುದು ಲೇಸು ಎಂಬ ತೀರ್ಮಾನಕ್ಕೆ ಬಂದಿದ್ದೆ'' ಎಂದು ಪ್ರತಿಕ್ರಿಯಿಸಿದರು.[೧೫]

ಮಿರ್ಜಾ ಅವರು ಸ್ಥಳೀಯ ಮುಸಲ್ಮಾನರ ಬಗ್ಗೆ ಹೇಳುತ್ತಾ, ''ನನ್ನ ಆಡಳಿತ ಅವಧಿಯಲ್ಲಿ ಮುಸ್ಲಿಮರು ಪ್ರತಿ ಹಂತದಲ್ಲೂ ನನ್ನನ್ನು ವಿರೋಧಿಸುತ್ತಿದ್ದರು. ನಾನು ಮುಸ್ಲಿಂ ವಿರೋಧಿ ಹಾಗೂ ಹಿಂದೂಗಳ ಪರವಾಗಿದ್ದೇನೆ ಎಂದು ವಾದಿಸಿದ್ದಾರೆ. ಇದು ದುರದೃಷ್ಟ. ನನ್ನ ಅಭಿಪ್ರಾಯದಲ್ಲಿ ಹೇಳುವುದಾದರೆ ಈ ಮುಸ್ಲಿಮರು ಈ ರಾಜ್ಯದ ಹಿತದ ವಿರುದ್ಧವಾಗಿ ವರ್ತಿಸುತ್ತಿದ್ದಾರೆ. ಇವರ ಈ ಮಾರ್ಗದಿಂದ ರಾಜ್ಯದ ಅವನತಿಯನ್ನು ತಮ್ಮಿಂದ ತಾವೇ ತಂದುಕೊಳ್ಳುತ್ತಿದ್ದಾರೆ. ಇದರ ಬಗ್ಗೆ ನಿಜಾಮರು ತುಂಬಾ ಎಚ್ಚರಿಕೆಯಿಂದ ಹೆಜ್ಜೆ ಇಡುವುದು ಸೂಕ್ತ ಎಂದು ನಾನು ಭಾವಿಸಿದ್ದೇನೆ. ದಿವಾನ ಹುದ್ದೆಗೆ ರಾಜೀನಾಮೆಯನ್ನು ಸಲ್ಲಿಸಿದರೂ ಕೂಡ ಹೈದರಾಬಾದ್ ಸಂಸ್ಥಾನದ ಯಾವುದೇ ಕೆಲಸದಲ್ಲಿ ನಿಜಾಮರು ನನ್ನ ಸಹಾಯ ಯಾಚಿಸಿದರೆ ಸಂತೋಷದಿಂದ ಸಹಕರಿಸುವೆ. ನಾನು ದೈಹಿಕವಾಗಿ ಸಂಸ್ಥಾನದಿಂದ ದೂರವಾಗಿದ್ದೇನೆಯೇ ಹೊರತು ಮಾನಸಿಕವಾಗಿಯಲ್ಲ. ಮಾನಸಿಕವಾಗಿ ನಾನು ಯಾವಾಗಲೂ ಸಂಸ್ಥಾನಕ್ಕೆ ಹತ್ತಿರವಾಗಿದ್ದೇನೆ.'' ಎಂದು ಹೇಳಿದರು.

ಮಿರ್ಜಾ ಅವರ ರಾಜೀನಾಮೆಗೆ ನಿಜಾಮ, ರಜಾಕಾರರು, ಅಧಿಕಾರಿಗಳು, ಕಾಂಗ್ರೆಸ್ ಯಾವ ರೀತಿ ಪ್ರತಿಕ್ರಿಯೆ ನೀಡಿದರು ಎಂಬುದನ್ನು ಈ ಕೆಳಗಿನಂತೆ ತಿಳಿಯಬಹುದು.

೧. ನಿಜಾಮನ ಪ್ರತಿಕ್ರಿಯೆ : ''ಸರ್ ಮಿರ್ಜಾ ಎಂ ಇಸ್ಮಾಯಿಲ್ ನನ್ನ ಮಿತ್ರ ಮತ್ತು ಸಂಸ್ಥಾನದ ದಿವಾನ ಆಗಿದ್ದರು. ಆದರೆ ಅವರಿಗೆ ಹೈದರಾಬಾದಿನ ಒಳಸಮಸ್ಯೆಗಳ ಪರಿಚಯ ಸಾಕಷ್ಟು ಇಲ್ಲ. ಒಂದು ವರ್ಷ ಕಾಲವೂ ಅವರು ಹೈದರಾಬಾದಿನಲ್ಲಿ ಅಧಿಕಾರದಲ್ಲಿರಲಿಲ್ಲ. ಅಲ್ಲದೆ ಇತ್ತೀಚಿನ ಬೆಳವಣಿಗೆ ಮತ್ತು ಅರಿವು ಅವರಿಗಿರಲಿಲ್ಲ. ಅಲ್ಲದೆ ಅವರು ಸಂಸ್ಥಾನದಲ್ಲಿ ನಿರಂಕುಶ ಅಧಿಕಾರಿಯಂತೆ ವರ್ತಿಸುತ್ತಿದ್ದರು. ಸಾರ್ವಜನಿಕ ಭೇಟಿ ಎಂಬ ಕಾರ್ಯಕ್ರಮದ ಮುಖಾಂತರ ತಾವೇ ಪ್ರಬಲರಾಗುತ್ತಿದ್ದರೇ ವಿನಾ ಸಂಸ್ಥಾನಕ್ಕೆ ಇದರಿಂದ ಯಾವುದೇ ಪ್ರಯೋಜನವಾಗಲಿಲ್ಲ. ಇವರು ರಾಷ್ಟ್ರೀಯ ಕಾಂಗ್ರೆಸ್ಸಿನ ಜೊತೆ ಉತ್ತಮ ಸಂಬಂಧ ಹೊಂದಿದ್ದು ಸಂಸ್ಥಾನದ ಪ್ರತಿಯೊಂದು ವಿಷಯವನ್ನು ಕೂಡ ಕಾಂಗ್ರೆಸ್ ನಾಯಕರೊಂದಿಗೆ ಚರ್ಚಿಸುತ್ತಿದ್ದರು. ಕಾಂಗ್ರೆಸ್ ಸಲಹೆಯಂತೆ ಇಲ್ಲಿ ಅಧಿಕಾರ ಚಲಾಯಿಸುತ್ತಿದ್ದರು. ಕಾಂಗ್ರೆಸ್ ಹೈದರಾಬಾದ್ ಸಂಸ್ಥಾನದ ಇವರ ಆಳ್ವಿಕೆಯ ಸಂದರ್ಭದಲ್ಲಿ ಭದ್ರ ನೆಲೆಯನ್ನು ಕಂಡುಕೊಂಡಿತು'' ಎಂದು ಆಪಾದಿಸಿದರು. ಮಿರ್ಜಾ ಅವರು ಮುಸ್ಲಿಂ ನಾಯಕರನ್ನು ಕೀಳಾಗಿ ಕಾಣುತ್ತ ಹಿಂದೂ ನಾಯಕರಿಗೆ ಅತಿ ಆತ್ಮೀಯತೆಯಿಂದ ನಮಸ್ಕರಿಸುತ್ತಿದ್ದರು. ಅವರಿಗೆ ನನ್ನ ಮತ್ತು ರಜಾಕಾರರ ಮೇಲೆ ನಂಬಿಕೆ ಇರಲಿಲ್ಲ ಎಂದು ನಿಜಾಮನು ಪ್ರತಿಕ್ರಿಯಿಸಿದನು.

೨. ರಜಾಕಾರರ ಪ್ರತಿಕ್ರಿಯೆ: ಮಿರ್ಜಾ ಅವರು ದಿವಾನರಾಗಿ ನೇಮಕವಾಗುವುದು ರಜಾಕಾರರಿಗೆ ಮನಸ್ಸಿರಲಿಲ್ಲ. ಆದರೂ ನಿಜಾಮರು ನೇಮಕ ಮಾಡಿದ್ದರಿಂದ ಅಂದಿನಿಂದ ಇವರು ಮಿರ್ಜಾ ಅವರಿಗೆ ಆಡಳಿತದಲ್ಲಿ ಸಹಾಯ ಮಾಡದೆ ಪ್ರತಿಯೊಂದನ್ನು ವಿರೋಧಿಸುತ್ತಿದ್ದರು. ಇವರ ಬಗ್ಗೆ ನಿಜಾಮರಿಗೆ

ಸುಳ್ಳು ಮಾಹಿತಿಯನ್ನು ನೀಡುತ್ತಿದ್ದರು. ಒಟ್ಟಾರೆಯಾಗಿ ಹೈದರಾಬಾದ್ ಸಂಸ್ಥಾನದಿಂದ ಅವರನ್ನು ಓಡಿಸಬೇಕೆಂಬುದು ಇವರ ತೀರ್ಮಾನವಾಗಿತ್ತು. ಅದಕ್ಕಾಗಿ ಮಿರ್ಜಾ ಅವರ ಮೇಲೆ ಮುಸ್ಲಿಂ ವಿರೋಧಿ ಎಂದು ಅಪಪ್ರಚಾರ ಮಾಡಿ ಇಡೀ ಮುಸ್ಲಿಂ ಸಮುದಾಯವನ್ನು ವಿರೋಧಿಸುವಂತೆ ಮಾಡಿದರು. ಇದರಿಂದ ಮನನೊಂದು ಇಲ್ಲಿ ಇರುವುದಕ್ಕಿಂತೆ ರಾಜಿನಾಮೆ ನೀಡಿ ಹೋಗುವುದೇ ಉತ್ತಮವೆಂದು ಮನಗಂಡು ರಾಜೀನಾಮೆ ನೀಡಿದರು. ಮಿರ್ಜಾ ರಾಜೀನಾಮೆ ನೀಡಿದ ವಿಷಯ ತಿಳಿದ ಕಾಸಿಂ ರಜ್ವಿ ಹೀಗೆ ಪ್ರತಿಕ್ರಿಯಿಸಿದರು. ''ಮೊದಲು ನಾವು ಧ್ವನಿ ಏರಿಸಿ ಹೇಳಿದೆವು. ಮೊದಲಿಗೆ ಅದರಿಂದ ಯಾವ ಪರಿಣಾಮವೂ ಉಂಟಾಗಲಿಲ್ಲ. ಅದರೆ ಇದು ನಮ್ಮ ಅಂತರಾತ್ಮದಿಂದ ಬಂದ ಮಾತಾಗಿದ್ದುದರಿಂದ, ಮಿರ್ಜಾ ಹೈದರಾಬಾದಿನಿಂದ ಓಡಿ ಹೋಗಬೇಕಾಯಿತು'' ಎಂದನು.[೧೮]

೩. ಅಧಿಕಾರಿಗಳ ಪ್ರತಿಕ್ರಿಯೆ : ಹೈದರಾಬಾದ್ ಸಂಸ್ಥಾನದಲ್ಲಿ ಕೆಲಸ ಮಾಡುತ್ತಿದ್ದ ಅಧಿಕಾರಿಗಳಲ್ಲಿ ಅರ್ಧದಷ್ಟು ಅಧಿಕಾರಿಗಳು ಮಿರ್ಜಾ ಅವರ ಪರವಾಗಿದ್ದರೆ ಇನ್ನೂ ಕೆಲವರು ರಜಾಕಾರರ ಅಧೀನರಾಗಿ ಮಿರ್ಜಾ ಅವರ ಕಾರ್ಯಗಳನ್ನು ವಿರೋಧಿಸುತ್ತಿದ್ದರು. ಸಂಸ್ಥಾನದಲ್ಲಿ ಹೊಸ ಯೋಜನೆಗಳನ್ನು ರಜಾಕಾರರ ಅಧೀನರಾದ ಅಧಿಕಾರಿಗಳು ವಿರೋಧಿಸುತ್ತಿದ್ದರು. ಹೇಗಾದರೂ ಮಾಡಿ ಇವರಿಗೆ ರಜಾಕಾರರ ಸಹಾಯದಿಂದ ಓಡಿಸಬೇಕೆಂದು ನಿರ್ಧರಿಸಿದರು. ಇದನ್ನು ಮನಗಂಡಿದ್ದ ಮಿರ್ಜಾ ಪರವಾಗಿದ್ದ ಅಧಿಕಾರಿಗಳು ನಿಮ್ಮ ಪ್ರಾಣಾಪಹರಣದ ಸಂಚು ನಡೆಯುತ್ತಿದೆ, ಹೈದರಾಬಾದ್ ಬಿಟ್ಟು ತೆರಳುವುದೇ ಕ್ಷೇಮವೆಂದು ಹಿತೈಷಿಗಳು ಅವರನ್ನು ಒತ್ತಾಯಿಸಿದರು. ಈ ಎಲ್ಲಾ ಬೆಳವಣಿಗೆಯಿಂದ ನಾನು ಇಲ್ಲಿರುವುದು ಕ್ಷೇಮವಲ್ಲವೆಂದು ರಾಜೀನಾಮೆ ನೀಡಿದರು. ಇವರ ರಾಜಿನಾಮೆಯಿಂದ ರಜಾಕಾರರ ಅಧೀನರಾಗಿದ್ದ ಅಧಿಕಾರಿಗಳಿಗೆ ಅಪಾರ ಸಂತೋಷದಿಂದ ತಮ್ಮ ಕಡುವೈರಿ ಹೋದನೆಂದು ಪ್ರತಿಕ್ರಿಯಿಸಿದರು. ಆದರೆ ಮಿರ್ಜಾ ಅವರ ಪರವಾಗಿದ್ದ ಅಧಿಕಾರಿಗಳು ಒಬ್ಬ ನಿಷ್ಠಾವಂತ ದಿವಾನನನ್ನು ಕಳೆದುಕೊಂಡೆವು. ಎಂಬುದಾಗಿ ಮರುಗಿದರು. ಹೀಗೆ ಹೈದರಾಬಾದಿನ ದುರಾಡಳಿತವನ್ನು ಸಹಿಸದೆ, ಅದನ್ನು ಸುಧಾರಿಸಲೂ ಸಾಧ್ಯವಾಗದೆ ಹೊರಗೆ ಬಂದ ಅಧಿಕಾರಿಗಳಲ್ಲಿ ಮಿರ್ಜಾ ಒಬ್ಬರೆಂದು ಪ್ರತಿಕ್ರಿಯಿಸಿದರು.[೧೯]

೪. ಕಾಂಗ್ರೆಸ್ಸಿನ ಪ್ರತಿಕ್ರಿಯೆ : ಮಿರ್ಜಾ ಅವರು ಹೈದರಾಬಾದ್ ಸಂಸ್ಥಾನದ ದಿವಾನರಾಗಿ ನೇಮಕವಾಗಿರುವ ವಿಷಯವನ್ನು ತಿಳಿದು ಕಾಂಗ್ರೆಸ್‌ನ ನಾಯಕರಾದ ಮಹಾತ್ಮ ಗಾಂಧಿ, ಪಂಡಿತ ಜವಹರಲಾಲ್ ನೆಹರೂ, ರಾಜಗೋಪಾಲಾಚಾರಿ, ಸರ್ದಾರ್ ವಲ್ಲಭಭಾಯಿ ಪಟೇಲರು ತುಂಬಾ ಸಂತೋಷಪಟ್ಟರು. ಮೈಸೂರಿನ ಮಾದರಿಯಂತೆ ಸಂಸ್ಥಾನ ಅಭಿವೃದ್ಧಿಯಾಗುತ್ತದೆ ಎಂದು ಭಾವಿಸಿದರು. ಆದರೆ ವಿಧಿಯಾಟವೇ ಬೇರೆಯಾಗಿತ್ತು. ದಿವಾನರಾಗಿ ಕಾಲಿಟ್ಟಾಗಲಿಂದಲೂ ಸಮಸ್ಯೆಗಳ ಮೇಲೆ ಸಮಸ್ಯೆಗಳು ಹುಟ್ಟಿಕೊಳ್ಳುತ್ತಿದ್ದವು. ಕೊನೆಗೆ ಮಿರ್ಜಾ ಅವರು ನಿಜಾಮರ ಮತ್ತು ರಜಾಕಾರರ ಧೋರಣೆಯಿಂದ ದಿವಾನ ಹುದ್ದೆಗೆ ರಾಜಿನಾಮೆ ನೀಡಿದರು. ಈ ವಿಷಯವನ್ನು ತಿಳಿದು ಕಾಂಗ್ರೆಸ್ ನಾಯಕರಿಗೆ ಗರಬಡಿದಂತಾಯಿತು. ಗಾಂಧೀಜಿಯವರು ರಾಜೀನಾಮೆಯನ್ನು ಕುರಿತು 'ಹೈದರಾಬಾದಿನ ಕೊಂಡಿ ಕಳಚಿದಂತಾಯಿತು' ಎಂದು ಪ್ರತಿಕ್ರಿಯಿಸಿದರು.[೨೦]

ಅಡಿಟಿಪ್ಪಣಿಗಳು

೧. ನಾರಾಯಣರಾವ್ ವಿ.ಎಸ್., ಮಿರ್ಜಾ ಎಂ ಇಸ್ಮಾಯಿಲ್ ಅವರ ಜೀವನ ಚರಿತ್ರೆ, ೧೯೭೫, ಪು.೧೧೩-೧೧೪

೨. ಚಿನ್ನಸ್ವಾಮಿ ಸೋಸಲೆ ಎನ್.(ಸಂ), ದಿವಾನ್ ಸರ್.ಮಿರ್ಜಾ ಎಂ ಇಸ್ಮಾಯಿಲ್ ಕಾಲದ ಮೈಸೂರು ಸಂಸ್ಥಾನ, ೨೦೦೨, ಪು.೪೯೩

೩. ನಾರಾಯಣರಾವ್ ವಿ.ಎಸ್., ಪೂರ್ವೋಕ್ತ, ಪು.೧೨೩

೪. ಚಿನ್ನಸ್ವಾಮಿ ಸೋಸಲೆ ಎನ್., ಪೂರ್ವೋಕ್ತ, ಪು.೭೮

೫. ದಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ ಜರ್ನಲ್, ಸ್ಪಡೀಸ್ ಆನ್ ದಿವಾನ್ ಸರ್ ಮಿರ್ಜಾ, ಸಂಪುಟ **LXXXVIII**, ಡಿಸೆಂಬರ್ ೧೯೯೭, ಪು.೬೪

೬. ಚಿನ್ನಸ್ವಾಮಿ ಸೋಸಲೆ ಎನ್., ಪೂರ್ವೋಕ್ತ, ಪು.೪೯೨-೪೯೩

೭. ನಾರಾಯಣರಾವ್ ವಿ.ಎಸ್., ಪೂರ್ವೋಕ್ತ, ಪು.೧೨೪-೧೨೫

೮. ಚಿನ್ನಸ್ವಾಮಿ ಸೋಸಲೆ ಎನ್., ಪೂರ್ವೋಕ್ತ, ಪು.೪೯೪

೯. ಅದೇ, ಪು.೭೭

೧೦. ಅದೇ, ಪು.೭೭, ೭೮

೧೧. ಅದೇ, ಪು.೨೮೯

೧೨. ನಾರಾಯಣರಾವ್ ವಿ.ಎಸ್., ಪೂರ್ವೋಕ್ತ, ಪು.೧೨೪

೧೩. ದಿ ಜರ್ನಲ್ ಆಫ್ ಮಿಥಿಕ್ ಸೊಸೈಟಿ ಜರ್ನಲ್, ಪೂರ್ವೋಕ್ತ, ಪು.೬೪-೬೫

೧೪. ಚಿನ್ನಸ್ವಾಮಿ ಸೋಸಲೆ ಎನ್., ಪೂರ್ವೋಕ್ತ, ಪು.೪೯೪

೧೫. ಮುನ್ಸಿ ಕೆ.ಎಂ.(ಅ), ರಂಗರಾವ್ ಎ.ಆರ್., ಒಂದು ಯುಗದ ಅಂತ್ಯ, ೨೦೦೭, ಪು.೬೭

೧೬. ಅದೇ, ಪು.೬೮

೧೭. ಮಿರ್ಜಾ ಎಂ ಇಸ್ಮಾಯಿಲ್, ದಿ ಪಬ್ಲಿಕ್ ಲೈಫ್, ೧೯೫೪, ಪು.೧೦೬, ೧೦೭

೧೮. ಮುನ್ಸಿ ಕೆ.ಎಂ.(ಅ), ರಂಗರಾವ್ ಎ.ಆರ್., ಪೂರ್ವೋಕ್ತ, ಪು.೫೮

೧೯. ನಾರಾಯಣರಾವ್ ವಿ.ಎಸ್., ಪೂರ್ವೋಕ್ತ, ಪು.೧೨೪

೨೦. ಅದೇ, ಪು.೧೨೪-೧೨೫

# ಅಧ್ಯಾಯ ಎಂಟು

# ಸಮಾರೋಪ

ಸರ್ ಮಿರ್ಜಾ ಎಂ.ಇಸ್ಮಾಯಿಲರು ಭಾರತ ಕಂಡ ಮಹಾನ್ ವಿದ್ವಾಂಸರು, ದಕ್ಷ ಆಡಳಿತಗಾರರು, ಪ್ರಗತಿಪರ ಚಿಂತಕರು ಹಾಗೂ ಶಿಸ್ತಿನ ಸಿಪಾಯಿಗಳಾಗಿದ್ದರು. ಮೈಸೂರು, ಜಯಪುರ ಮತ್ತು ಹೈದರಾಬಾದ್ ಸಂಸ್ಥಾನಗಳಲ್ಲಿ ದಿವಾನರಾಗಿ ಮಾಡಿದ ಅಭಿವೃದ್ಧಿ ಕೆಲಸಕಾರ್ಯಗಳಿಂದ ಅವರು ಇತಿಹಾಸ ಪುಟಗಳಲ್ಲಿ ಶಾಶ್ವತವಾದ ಸ್ಥಾನವನ್ನು ಪಡೆದುಕೊಂಡಿದ್ದಾರೆ.

ಮಿರ್ಜಾ ಎಂ ಇಸ್ಮಾಯಿಲ್ ಅವರ ಪೂರ್ವಜರು ಪರ್ಶಿಯಾ ದೇಶಕ್ಕೆ ಸೇರಿದವರು. ಇವರ ಅಜ್ಜ ಅಲಿ ಆಸ್ಕರ್ ೧೮೨೪ರಲ್ಲಿ ಪರ್ಷಿಯಾದ ಪಿರಾಜ್ ನಗರದಿಂದ ಅವರ ಅಣ್ಣಂದಿರೊಡನೆ ಬೆಂಗಳೂರಿಗೆ ಕುದುರೆ ವ್ಯಾಪಾರ ನಡೆಸಲು ಬಂದವರು. ಬೆಂಗಳೂರಿನ ಹವಾಗುಣದಿಂದ ಆಕರ್ಷಿತರಾದ ಆಲಿ ಆಸ್ಕರ್ ಇರಾನಿಗೆ ಹಿಂದಿರುಗದೆ ಬೆಂಗಳೂರಿನಲ್ಲಿಯೇ ನೆಲೆಸಿದರು. ಅವರು ತಮ್ಮ ೮೩ನೆಯ ವಯಸ್ಸಿನಲ್ಲಿ ಇಲ್ಲಿಯೇ ತೀರಿಕೊಂಡರು. ಇವರ ಮಗ ಆಗಾಜಾನ್ ಮೈಸೂರು ಸಂಸ್ಥಾನದಲ್ಲಿ ಅಶ್ವಾಲಯದಲ್ಲಿ ಅಧಿಕಾರಿಯಾಗಿ ಕೆಲಸಕ್ಕೆ ಸೇರಿಕೊಂಡು ಮೈಸೂರಿನ ಅರಸ ಚಾಮರಾಜ ಒಡೆಯರ ಪ್ರೀತಿಗೆ ಪಾತ್ರರಾಗಿದ್ದರು. ಆಗಾಜಾನನ ಉತ್ತಮ ಗುಣಗಳಿಂದ ಮುಂದೆ ಇವರ ಇಬ್ಬರ ನಡುವಿನ ಪರಿಚಯ ಸ್ನೇಹವಾಗಿ ಪರಿವರ್ತನೆ ಹೊಂದಿತು. ಆಗಾಜಾನ ತಮ್ಮ ಮಗನಾದ ಮಿರ್ಜಾ ಎಂ ಇಸ್ಮಾಯಿಲರನ್ನು ಆಗಾಗ ಅರಮನೆಗೆ ಕರೆದುಕೊಂಡು ಹೋಗುತ್ತಿದ್ದರು. ಇದರಿಂದಾಗಿ ತಂದೆಯಂತೆ ಮಿರ್ಜಾ ಅವರು ಕೂಡ ನಾಲ್ವಡಿ ಕೃಷ್ಣರಾಜ ಒಡೆಯರ ಪರಮ ಮಿತ್ರರಾದರು.

ಮಿರ್ಜಾ ಅವರು ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯ ಸಂದಿಗ್ಧ ಸ್ಥಿತಿಯಲ್ಲಿ ಮೈಸೂರು ಸಂಸ್ಥಾನದ ದಿವಾನರಾಗಿ ನೇಮಕವಾದರು. ಆ ಸಂದರ್ಭದಲ್ಲಿ ಸಂಸ್ಥಾನದಲ್ಲಿ ಅನೇಕ ಸಮಸ್ಯೆಗಳು ಇದ್ದವು. ಅವುಗಳನ್ನು ಪರಿಹರಿಸಲು ಪ್ರಯತ್ನಿಸಿಸುತ್ತಾ ವಿಶ್ವೇಶ್ವರಯ್ಯ ಹಾಕಿಕೊಟ್ಟ ಅಡಿಪಾಯದ ಮೇಲೆ ಮಿರ್ಜಾ ಎಂ ಇಸ್ಮಾಯಿಲ್ ಮಾಡಿದ ಸಾಧನೆಗಳು ಅವರಿಗೆ ಒಬ್ಬ ದಿವಾನರೆಂಬ ಖ್ಯಾತಿಯನ್ನು ತಂದಿತು. ಸಂಸ್ಥಾನದಲ್ಲಿ

ಸರ್ವತೋಮುಖ ಪ್ರಗತಿಗೆ ಶ್ರಮಿಸಿ ತಮ್ಮ ಆಳ್ವಿಕೆ ಕಾಲದಲ್ಲಿ ಕೈಗಾರಿಕಾ ಕ್ಷೇತ್ರದಲ್ಲಿ ಉಲ್ಲೇಖನಿಯ ಪ್ರಗತಿಯಾಯಿತು. ಮಿರ್ಜಾ ಅವರ ಆಡಳಿತದ ಬಹುಭಾಗವು ವಿವಿಧ ರೀತಿಯ ಸಾರ್ವಜನಿಕ ಚಳವಳಿಗಳನ್ನು ಹತ್ತಿಕ್ಕುವುದರಲ್ಲಿಯೇ ಕಳೆಯಿತು. ಒಂದೆಡೆ ಕಾಂಗ್ರೆಸ್ ನಾಯಕರಾದ ಗಾಂಧಿ ಹಾಗೂ ನೆಹರು ಜೊತೆ ಸ್ನೇಹ, ಇನ್ನೊಂದೆಡೆ ಕಾಂಗ್ರೆಸ್ ಸಂಸ್ಥಾನದಲ್ಲಿ ನಡೆಸಿದ ಚಳವಳಿಗಳನ್ನು ನಿಯಂತ್ರಿಸಿರುವುದು ಮಿರ್ಜಾ ಅವರನ್ನು ಅನೇಕ ಇಕ್ಕಟ್ಟಿನ ಸ್ಥಿತಿಗಳನ್ನು ಎದುರಿಸುವಂತೆ ಮಾಡಿತು. ಚಳವಳಿಗಳನ್ನು ದಮನಕಾರಿ ವಿಧಾನಗಳಿಂದ ಹತ್ತಿಕ್ಕಿ ಕುಖ್ಯಾತರಾದರು. ಸುಲ್ತಾನಪೇಟೆ ಗಣಪತಿ ಗಲಭೆ ಎಂಬ ಪ್ರಕರಣ ೧೯೨೮ರಲ್ಲಿ ನಡೆದುದರಿಂದ ಇದರ ವಿಚಾರಣೆಗಾಗಿ ಸರ್ ಎಂ.ವಿಶ್ವೇಶ್ವರಯ್ಯನವರ ನೇತೃತ್ವದಲ್ಲಿ ಒಂದು ವಿಚಾರಣಾ ಸಮಿತಿಯನ್ನು ಆಗ ನೇಮಿಸಲಾಯಿತು. ಈ ಸಮಿತಿಯು ಜವಾಬ್ದಾರಿ ಸರ್ಕಾರವನ್ನು ಸಂಸ್ಥಾನದಲ್ಲಿ ಸ್ಥಾಪಿಸಬೇಕೆಂದು ಶಿಫಾರಸ್ಸು ಮಾಡಿತು.

ಮಿರ್ಜಾ ಅವರು ಅಭಿವೃದ್ಧಿ ಕಾರ್ಯಗಳ ಕಡೆಗೆ ಹೆಚ್ಚಿನ ಒತ್ತನ್ನು ನೀಡಿದರು. ಭದ್ರಾವತಿ ಕಬ್ಬಿಣ ಕಾರ್ಖಾನೆಗೆ ಉಕ್ಕಿನ ಎಂಟನೆಯ ಭಾಗವೊಂದನ್ನು ಸೇರಿಸಿ ಅದನ್ನು ಮಿರ್ಜಾ ವಿಸ್ತರಿಸಿದರು. ಭದ್ರಾವತಿಯಲ್ಲಿ ಸಿಮೆಂಟ್ ಕಾರ್ಖಾನೆ, ಹಿಂದೂಸ್ಥಾನ ಏರೋನಾಟಿಕ್ಸ್ ಲಿಮಿಟೆಡ್ ಸ್ಥಾಪನೆ ಮುಂತಾದವು ಇವರ ಕಾಲದ ಇತರ ಪ್ರಮುಖ ಸಾಧನೆಗಳು. ಶಿಂಷಾ ಹಾಗೂ ಜೋಗಗಳಲ್ಲಿ ವಿದ್ಯುತ್ ಉತ್ಪಾದನೆ ಆರಂಭಿಸಿದರು. ಹಾಗೇ ಉದ್ಯಾನಗಳ ಪ್ರಿಯರಾದ ಅವರು ಪೇಟೆ ಪಟ್ಟಣಗಳಲ್ಲಿ ಸುಂದರವಾದ ಉದ್ಯಾನವನ ನಿರ್ಮಾಣಕ್ಕೆ ಪ್ರೋತ್ಸಾಹ ನೀಡಿದರು. ಸಮರ್ಥ ಆಡಳಿತಗಾರರಾದ ಅವರು ಕೆಲಸಗಳಲ್ಲಿ ಹಗಲಿರುಳು ಶ್ರಮಿಸುತ್ತಿದ್ದು ನಿರ್ಮಲ ದಕ್ಷ ಆಡಳಿತ ವ್ಯವಸ್ಥೆಯನ್ನು ರೂಪಿಸಲು ದುಡಿದರು. ಸಂಸ್ಥಾನದಾದ್ಯಂತ ಸಂಚಾರ ಮಾಡಿ ಜನರ ಕಷ್ಟ ಕೋಟಲೆಗಳನ್ನು ಸ್ವತಃ ತಿಳಿದುಕೊಳ್ಳುತ್ತಿದ್ದರು. ಶೇಷಾದ್ರಿ ಅಯ್ಯರರ ನಂತರ ದೀರ್ಘಕಾಲ ದಿವಾನರಾಗಿದ್ದ ಮಿರ್ಜಾ ಸಂಸ್ಥಾನದ ಪ್ರಗತಿಗೆ ತಮ್ಮದೇ ಆದ ಕೊಡುಗೆ ನೀಡಿದರು. ಇವರ ಈ ಸೇವೆಯನ್ನು ನೋಡಿದ ಜಯಪುರದ ಮಹಾರಾಜರು ಕೂಡ ತಮ್ಮ ಸಂಸ್ಥಾನಕ್ಕೆ ದಿವಾನರಾಗಿ ಬರುವಂತೆ ಆಹ್ವಾನಿಸಿದರು. ಅವರು ಮೈಸೂರಿನ ಮಾದರಿಯಲ್ಲಿ ಅನೇಕ ಸುಧಾರಣೆಗಳನ್ನು ಮಾಡಿ ಜಯಪುರ ಸಂಸ್ಥಾನವನ್ನು ಒಂದು ಪ್ರಗತಿಪರ ಸಂಸ್ಥಾನವನ್ನಾಗಿ ಮಾಡಿದರು.

ಮೈಸೂರು ಮತ್ತು ಜಯಪುರ ಸಂಸ್ಥಾನಗಳಲ್ಲಿ ಮಿರ್ಜಾ ಮಾಡಿದ ಪ್ರಗತಿಯನ್ನು ಕಂಡ ಹೈದರಾಬಾದಿನ ಸಂಸ್ಥಾನದ ನಿಜಾಮ ಉಸ್ಮಾನ ಅಲಿಖಾನನು ಹೈದರಾಬಾದ್ ಸಂಸ್ಥಾನಕ್ಕೆ ತಾವು ದಿವಾನರಾಗಿ ಬರಬೇಕೆಂದು ಪತ್ರದ ಮುಖಾಂತರ ಮಿರ್ಜಾ ಅವರಿಗೆ ಕೇಳಿಕೊಂಡನು. ಆದರೆ ಮಿರ್ಜಾ ಅವರಿಗೆ ಹೈದರಾಬಾದಿಗೆ ಹೋಗಲು ಮನಸ್ಸಿರಲಿಲ್ಲ. ಆದರೂ ನಿಜಾಮರ ಒತ್ತಾಯದಿಂದ ಕೊನೆಗೂ ಹೈದರಾಬಾದ್ ಸಂಸ್ಥಾನದ ದಿವಾನರಾಗಲು ಒಪ್ಪಿಗೆಯನ್ನು ಸೂಚಿಸಿದರು. ಇವರು ಒಪ್ಪಿಗೆ ಸೂಚಿಸಿದ್ದಕ್ಕೆ ಗಾಂಧಿ, ರಾಜಗೋಪಾಲಚಾರ್ಯ, ನೆಹರೂ ಮುಂತಾದವರು ಸಂತಸ ವ್ಯಕ್ತಪಡಿಸಿ ಶುಭ ಕೋರಿದರು. ಜಿನ್ನಾ

ಮಾತ್ರ ಈ ನೇಮಕಕ್ಕೆ ವಿರೋಧವನ್ನು ವ್ಯಕ್ತಪಡಿಸಿ ಈ ವಿಷಯವನ್ನು ಕುರಿತು ಮಾತನಾಡಲು ಹೈದರಾಬಾದಿಗೆ ಬಂದು ನಿಜಾಮರ ಮುಂದೆ ಕೆಟ್ಟದಾಗಿ ವರ್ತಿಸಿದ್ದರಿಂದ ಕೋಪಗೊಂಡ ನಿಜಾಮ ಕಟು ಭಾಷೆಯಲ್ಲಿ ತನ್ನ ವಿರೋಧವನ್ನು ವ್ಯಕ್ತಪಡಿಸಿದರು. ಜಿನ್ನಾ ಇದರಿಂದ ಕೋಪಗೊಂಡು ಹೇಗಾದರೂ ಮಾಡಿ ಮಿರ್ಜಾ ಅವರ ನೇಮಕವನ್ನು ನಿಲ್ಲಿಸುವಂತೆ ಮುಸ್ಲಿಂ ನಾಯಕರ ಮೇಲೆ ಪ್ರಭಾವ ಬೀರಿದರು. ಆದರೆ ನಿಜಾಮನು ಯಾರ ಮಾತಿಗೂ ಕಿವಿಗೊಡದೆ ಮಿರ್ಜಾ ಅವರನ್ನು ಹೈದರಾಬಾದ್ ಸಂಸ್ಥಾನದ ದಿವಾನರಾಗಿ ನೇಮಕ ಮಾಡಿದನು.

ಮಿರ್ಜಾ ಅವರು ಸಂಸ್ಥಾನದ ದಿವಾನರಾಗಿ ಅಧಿಕಾರ ಸ್ವೀಕರಿಸಿದ ಮೇಲೆ ಬಾನುಲಿ ಭಾಷಣ ಮಾಡುತ್ತಾ ಈ ದೊಡ್ಡ ಸಂಸ್ಥಾನದಲ್ಲಿ ಅನೇಕ ಸಮಸ್ಯೆಗಳಿವೆ, ಅವುಗಳನ್ನು ಸೂಕ್ಷ್ಮವಾಗಿ ಪರಿಹರಿಸುತ್ತಾ ಹೋಗೋಣ ಎಂದು ಜನರಿಗೆ ಸಂದೇಶ ನೀಡಿ ಮೈಸೂರಿನ ಮಾದರಿಯಲ್ಲಿ ಅಭಿವೃದ್ಧಿಯನ್ನು ಮಾಡಲು ಹೊಸ ಹೊಸ ಪ್ರಯೋಗ ಮಾಡಿದರು. ಇದರಿಂದ ಕಾಸಿಂ ರಜ್ವಿಗೆ ತುಂಬಾ ತೊಂದರೆಯಾಯಿತು. ಹೇಗಾದರು ಮಾಡಿ ಈ ಅಭಿವೃದ್ಧಿಯನ್ನು ನಿಲ್ಲಿಸಿ ಮಿರ್ಜಾ ಅವರನ್ನು ದಿವಾನ್ ಹುದ್ದೆಯಿಂದ ಕೆಳಗಿಳಿಸಬೇಕೆಂದು ತನ್ನ ನೇತೃತ್ವದ ಮುಸ್ಲಿಂ ಸಂಘಟನೆಯಾದ ರಜಾಕಾರರ ಸಂಘಟನೆಗೆ ತಿಳಿಸಿದನು. ಈತನ ಮಾತಿನಂತೆ ರಜಾಕಾರರು ಮಿರ್ಜಾ ಅವರಿಗೆ ಪ್ರತಿ ಸಂದರ್ಭದಲ್ಲಿಯೂ ಕಿರುಕುಳ ನೀಡಲಾರಂಭಿಸಿದರು.

ಇಷ್ಟೆಲ್ಲಾ ರಜಾಕಾರರ ಉಪಟಳ ನಡೆದರೂ ನಿಜಾಮರು ಮಧ್ಯ ಪ್ರವೇಶಿಸದೆ ತಟಸ್ಥರಾಗಿ ಉಳಿದರು. ರಜಾಕಾರರು ಮಿರ್ಜಾ ಅವರನ್ನು ಮುಸ್ಲಿಂ ವಿರೋಧಿ ಎಂದು ಸುಳ್ಳು ಪ್ರಚಾರ ಮಾಡಿ ಅವರ ಮೇಲೆ ಮುಸ್ಲಿಮರು ತಿರುಗಿಬೀಳುವಂತೆ ಮಾಡಿದರು. ಹಾಗೇ ಮಿರ್ಜಾ ಅವರು ಹಿಂದೂಗಳನ್ನು ನೋಡಿ ಕೈ ಮುಗಿದು ನಮಸ್ಕಾರ ಮಾಡುತ್ತಾರೆ ಎಂದು ಪ್ರಚಾರ ಮಾಡಿದರು. ಹೀಗೆ ದಿನನಿತ್ಯ ಒಂದೊಂದು ಘಟನೆ ಯಿಂದ ಮಿರ್ಜಾ ಅವರು ನೊಂದುಕೊಂಡು ಇಲ್ಲಿ ಇರುವುದಕ್ಕಿಂತ ರಾಜೀನಾಮೆಯನ್ನು ನೀಡುವುದೇ ಲೇಸು ಎಂದು ತಿಳಿದು ತಮ್ಮ ರಾಜೀನಾಮೆಯನ್ನು ನೀಡಿದರು.

ಮಿರ್ಜಾ ಎಂ ಇಸ್ಮಾಯಿಲರಂತಹ ವ್ಯಕ್ತಿತ್ವ ಇರುವ ವ್ಯಕ್ತಿಗಳು ಚರಿತ್ರೆಯಲ್ಲಿ ಕಂಡುಬರುವುದು ತುಂಬ ಅಪರೂಪ. ಮಿರ್ಜಾ ಅವರು ಮೈಸೂರು, ಜಯಪುರ ಮತ್ತು ಹೈದರಾಬಾದಿನ ಇತಿಹಾಸದಲ್ಲಿ ಬಹುಕಠಿಣವಾದ ಪರಿಸ್ಥಿತಿಯಲ್ಲಿ ದಿವಾನರಾಗಿ ನೇಮಕಗೊಂಡು ರಾಜ್ಯಕ್ಕೆ ಉಪಯುಕ್ತವಾದ ಸೇವೆಯನ್ನು ಸಲ್ಲಿಸಿದರು. ಹೈದರಾಬಾದ್ ಸಂಸ್ಥಾನದಲ್ಲಿ ದಿವಾನರಾಗಿ ಕಾರ್ಯ ಮಾಡುವ ಸಂದರ್ಭದಲ್ಲಿ ಅನೇಕ ಸಮಸ್ಯೆಗಳನ್ನು ಎದುರಿಸಿದರು. ಹೇಗಾದರೂ ಮಾಡಿ ಸಂಸ್ಥಾನವನ್ನು ಅಭಿವೃದ್ಧಿಗೊಳಿಸಬೇಕೆಂಬ ಅವರ ಕನಸು ಕನಸಾಗಿಯೇ ಉಳಿಯಿತು. ಏಕೆಂದರೆ ಅದಕ್ಕೆ ಅವಕಾಶ ನೀಡದೆ ಪ್ರತಿ ಹಂತದಲ್ಲಿ ರಜಾಕಾರರು ಮಿರ್ಜಾ ಅವರನ್ನು ಟೀಕಿಸುತ್ತ ವಿರೋಧಿಸುತ್ತಿದ್ದರು. ನಿಜವಾಗಿ ಹೇಳಬೇಕೆಂದರೆ ಮಿರ್ಜಾ ಅವರ ನೇಮಕ

ಹೈದರಾಬಾದ್ ಸಂಸ್ಥಾನಕ್ಕೆ ಒಂದು ಒಳ್ಳೆಯ ಅವಕಾಶವನ್ನು ತಂದಿತ್ತು. ಮಿರ್ಜಾ ಅವರನ್ನು ನಿಜಾಮನು ಸರಿಯಾಗಿ ಉಪಯೋಗಿಸಿಕೊಂಡು ಸಂಸ್ಥಾನವನ್ನು ಪ್ರಬಲ ಸಂಸ್ಥಾನವನ್ನಾಗಿ ಮಾಡಬಹುದಿತ್ತು. ಆದರೆ ನಿಜಾಮನು ಆ ಕೆಲಸ ಮಾಡದೆ ಮಿರ್ಜಾ ಅವರನ್ನು ಅನುಮಾನದಿಂದ ನೋಡಲು ಪ್ರಾರಂಭಿಸಿದನು. ಆಡಳಿತದಲ್ಲಿ ಸಹಾಯ ಮಾಡದೆ ತಟಸ್ಥನಾಗಿ ಉಳಿದನು. ಈ ರೀತಿ ಮಾಡಿದ ಪ್ರತಿಫಲವಾಗಿ ೧೯೪೮ರಲ್ಲಿ ಸೈನಿಕ ಕಾರ್ಯಾಚರಣೆಯನ್ನು ಎದುರಿಸಬೇಕಾಯಿತು.

# ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು

೨. ನಕ್ಷೆಗಳು

೩. ಛಾಯಾಚಿತ್ರಗಳು

# ೧. ಪರಾಮರ್ಶನ ಗ್ರಂಥಗಳು


**ಕನ್ನಡ ಕೃತಿಗಳು**

೧. ಕೃಷ್ಣರಾವ್ ಎಂ.ವಿ. ಮತ್ತು ಕೇಶವ ಭಟ್ಟ ಎಂ., ಕರ್ನಾಟಕ ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು, ೧೯೭೦

೨. ಗೋವಿಂದರಾಜು ಸಿ.ಆರ್.(ಸಂ), ಇತಿಹಾಸ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೩. ಗೋಪಾಲರಾವ್ ಹೇಜೀಬ್, ಹೈದರಾಬಾದ್ ಮುಕ್ತಿ ಸಂಘರ್ಷ, ರಾಷ್ಟ್ರೋತ್ಥಾನ ಸಾಹಿತ್ಯ, ಬೆಂಗಳೂರು, ೨೦೦೧

೪. ಚಂದ್ರಶೇಖರ ಎಸ್., ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ, ಬಿಳಿಗೆರೆ, ೨೦೦೨

೫. ಚಂದ್ರಶೇಖರ್ ಎಸ್., ವಸಾಹತುಕಾಲೀನ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೬. ಚಿನ್ನಸ್ವಾಮಿ ಸೋಸಲೆ ಎನ್.(ಸಂ), ದಿವಾನ್ ಸರ್ ಮಿರ್ಜಾ ಎಂ ಇಸ್ಮಾಯಿಲ್ ಕಾಲದ ಮೈಸೂರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨

೭. ದೇವರಕೊಂಡಾ ರೆಡ್ಡಿ(ಸಂ), ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೮. ದೀಕ್ಷಿತ್ ಜಿ.ಎಸ್., ರಾಮಸ್ವಾಮಿ ಬಿ., ಶ್ರೀ ಕೃಷ್ಣದೇವರಾಯನ ಜೀವನ ಸಾಧನೆಗಳು, ಮೈಸೂರು, ೧೯೬೭

೯. ದಿವಾಕರ್ ಆರ್.ಆರ್., ಕರ್ನಾಟಕ ಪರಂಪರೆ, ಸಂಪುಟ ೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೨

೧೦. ನಾರಾಯಣರಾವ್ ವಿ.ಎಸ್., ಮಿರ್ಜಾ ಇಸ್ಮಾಯಿಲ್ ಅವರ ಜೀವನ ಚರಿತ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೧೧. ಪಾಟೀಲ ಎಚ್.ಎಸ್.(ಸಂ), ವಿಮೋಚನೆ, ಜಿಲ್ಲಾ ಆಡಳಿತ, ಕೊಪ್ಪಳ, ೧೯೯೯

೧೨. ಪಾಟೀಲ ಎಂ.ಬಿ.(ಸಂ), ಕರ್ನಾಟಕ ರಾಜ್ಯ ಗುಲಬರ್ಗಾ ಜಿಲ್ಲಾ ದರ್ಶನ, ಗುಲಬರ್ಗಾ ಪ್ರಕಾಶನ, ಗುಲಬರ್ಗಾ, ೧೯೯೭

೧೩. ಬಸವರಾಜ ಎಸ್.ಅಕ್ಕಿ, ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ, ಸೋಮೇಶ್ವರ ಪ್ರಕಾಶನ, ಧಾವರಾಡ, ೨೦೦೪

೧೪. ಬಸವರಾಜ ಪೊಲೀಸ್ ಪಾಟೀಲ(ಸಂ), ಬಿಡುಗಡೆ, ಚೇತನ ಪ್ರಕಾಶನ, ಗುಲಬರ್ಗಾ, ೨೦೦೭

೧೫. ಬಸವರಾಜ ನಾಗುರ್, ಹದಗೆಟ್ಟ ಹೈದರಾಬಾದ್, ರಾಧಾ ಪ್ರಿಂಟರ್ಸ್, ಬಿಜಾಪುರ, ೧೯೪೮

೧೬. ಬಾಲಚಂದ್ರ ಜಯಶೆಟ್ಟಿ, ಹೈದರಾಬಾದ್ ಕರ್ನಾಟಕದ ವಿಮೋಚನಾ ಚಳವಳಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೬

೧೭. ಮಹಾಬಲೇಶ್ವರಪ್ಪ ಬಿ.ಸಿ., ಹೈದರಾಬಾದ್ ಕರ್ನಾಟಕದ ರಾಜಕೀಯ ಚಳವಳಿ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೭

೧೮. ಮುನ್ಷಿ ಕೆ.ಎಂ.ಅನು, ರಂಗರಾವ್ ಎ.ಆರ್., ಒಂದು ಯುಗದ ಅಂತ್ಯ, ಭಾರತೀಯ ವಿದ್ಯಾ ಭವನ, ಮೈಸೂರು, ೨೦೦೬

೧೯. ಮಜುಂದಾರ್ ಪಿ.ಆರ್., ಭಾರದ್ವಾಜ್ ಆರ್.ಕೆ., ದಕ್ಷಿಣ ಭಾರತದ ಇತಿಹಾಸ, ಚೇತನ ಬುಕ್‌ಹೌಸ್, ಮೈಸೂರು, ೧೯೯೯

೨೦. ರಂಗಸ್ವಾಮಯ್ಯ ಜಿ.ಆರ್., ಕರ್ನಾಟಕದ ಸಂಕ್ಷಿಪ್ತ ಚರಿತ್ರೆ, ಚೇತನ ಬುಕ್‌ಹೌಸ್, ಮೈಸೂರು, ೨೦೦೧

೨೧. ರಾಬರ್ಟ್ ಸಿವೆಲ್(ಅನು), ಸದಾನಂದ ಕನವಳ್ಳಿ, ಮರೆತುಹೋದ ಮಹಾಸಾಮ್ರಾಜ್ಯ, ವಿಜಯನಗರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೨೨. ಶಂಕರ ನಾರಾಯಣರಾವ್ ಎಂ.ವಿ.(ಅನು), ಪ್ರಾಚೀನ ಭಾರತ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೨

೨೩. ಶಿವರುದ್ರಸ್ವಾಮಿ ಎಸ್.ಎನ್., ಕರ್ನಾಟಕ ಪ್ರೌಢ ಇತಿಹಾಸ ಮತ್ತು ಸಂಸ್ಕೃತಿ, ಪೌರಸ್ತ್ಯ ಪ್ರಕಾಶನ, ತಿಪಟೂರು, ೨೦೦೦

೨೪. ಸುಬ್ಬರಾವ್ ಎನ್.ಎಸ್., ಮೈಸೂರು ಕೈಪಿಡಿ, ಮೈಸೂರು ವಿದ್ಯಾಶಾಖೆ, ಬೆಂಗಳೂರು, ೧೯೩೭

೨೫. ಸೂರ್ಯನಾಥ್ ಯು.ಕಾಮತ್, ಕರ್ನಾಟಕ ಸಂಕ್ಷಿಪ್ತ ಇತಿಹಾಸ, ಎಂ.ಸಿ.ಸಿ.ಪಬ್ಲಿಕೇಶನ್, ಬೆಂಗಳೂರು, ೧೯೮೫

೨೬. ಮಿರ್ಜಾ ಇಸ್ಮಾಯಿಲರು ಗಾಂಧೀಜಿಗೆ ಬರೆದ ಪತ್ರ ೨೧.೦೮.೧೯೪೬

ಇಂಗ್ಲಿಷ್ ಗ್ರಂಥಗಳು

1. **Annual Administration Report 1945-1946**

2. Desai V.H., **Vandemataram to Janaganamana,** Hyderabad

3. Karaka D.F., **Fabulous Mogual Nizam III of Hyderabad,** London, 1948

4. Kate P.N., **Marathawad under the Niazm,** Mittle Publication, Delhi, 1987

5. Mirza Ismail, **My Public Life,** London, 1954

6. Narsing M.Rao, **Fifty years Hyderabad,** Hyderabad, 1982

7. Parveern Rukshana, **Mirza Ismail, Seminar paper,** Mythic Soceity, Bangalore

8. Nawab Chhatari, **Prime Minister of Hyderbad,** Hyderbad, 1956

9. **Quarterly Journal of Mythic Soceity,** Vol.xxxi, No.324, April, 1941

10. Rao C.R., **The Historic Telengana Struggle,** Delhi, 1972

11. Ramesan, **Freedom Struggle in Hydarabad, Vol.VI,** Hyderabad, 1962

12. Swami Ramanandatirtha, **Memrirs of Hydarabad Freedom Struggle,** Bombay, 1967

13. Sarkar J.N., **History of Aurangzeb,** Vol.5, Calcutta, 1925

14. Sinha S.K., **Medieval History of the Deccan, Vol.I,** Bahamanis, Hyderbad, 1964

15. Sherwani H.K., **The Bahamanis of the Deccan,** Hyderabad, 1953

16. Sherwani H.K., **Telengana under Ibrahim qutb shab,** Hyderabad, 1957

17. **Studies on Dewan Sir Mirza,** The Quarterly Journal of the Mythi Society, 1993

18. Suryanath U Kamath, **Karnataka State Gazetteer, Part I,** Govt of Karnataka, Bangalore, 1982

19. Suryanatha U. Kamath, **History of Karnataka(Seminar paper),** Mythic Soceity, Bangalore

20. Vandemataram Ramachandra Rao, **Police Action Hyderabad State,** Hyderabad, 19970

**ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧಗಳು**

೧. ದುರುಗಪ್ಪ ಎಂ.ಕೆ., ವಿಜಯನಗರೋತ್ತರ ಕಾಲದ ಬೇಡ ಜನಾಂಗದಲ್ಲಾದ ಸ್ಥಿತ್ಯಂತರಗಳು: ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೨. ಮಹೇಶ, ದೇವದುರ್ಗ ತಾಲ್ಲೂಕಿನ ಶಾಸನಗಳು ಮತ್ತು ಅವಶೇಷಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

**ಅಪ್ರಕಟಿತ ಎಂ.ಫಿಲ್.ನಿಬಂಧಗಳು**

೧. ಅಮರೇಶ, ದೇವದುರ್ಗ ಸಂಸ್ಥಾನ: ಒಂದು ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೨. ಸಂತೋಷಕುಮಾರ, ಚಾಂದಬೀಬಿ: ಚಾರಿತ್ರಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ,ಹಂಪಿ, ೨೦೦೯

೩. ಸುಭಾಷಚಂದ್ರ ದೊಡ್ಡಮನಿ, ಹೈದರಾಬಾದ್ ವಿಮೋಚನ ಆಂದೋಲನದಲ್ಲಿ ಕಲಬುರ್ಗಿ ಜಿಲ್ಲೆ ಶಿಬಿರಗಳ ಪಾತ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೪. ಶರಣಪ್ಪ ಉಮಚಗಿ, ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

# ಭಾರತ




ಇಚಿಪಿರೀಲ್ ಗ್ಯಾಜೆಟೀಯರ್,ಅಟ್ಲಾಸ್ ಆಫ್ ಇಂಡಿಯಾ

# ಭಾರತ ಭೂಪಟ




ಇಂಪಿರೀಲ್ ಗ್ಯಾಜಿಟೀಯರ್ ಅಟ್ಲಾಸ್ ಆಫ್ ಇಂಡಿಯಾ




ಇಂಪಿರೀಲ್ ಗ್ಯಾಜೆಟೀಯರ್,ಅಟ್ಲಾಸ್ ಆಫ್ ಇಂಡಿಯಾ

ಹೈದರಾಬಾದ್ ಸಂಸ್ಥಾನ ಭೂಪಟ




ಇಂಪಿರೀಲ್ ಗ್ಯಾಜಟೀಯರ್,ಅಟ್ಲಾಸ್ ಆಫ್ ಇಂಡಿಯಾ

೯೮



Dewan Sir Mirza M. Ismail

ಸರ್ ಮಿರ್ಜಾ ಎಂ ಇಸ್ಮಾಯಿಲ್



Sir Mirza and Mrs. Mirza with Mahatma Gandhi and Kasturba in 1927

ಸರ್ ಮಿರ್ಜಾ ಮತ್ತು ಶ್ರೀಮತಿ. ಮಿರ್ಜಾ ಜೊತೆ ಮಹಾತ್ಮ ಗಾಂಧೀಜಿ ಮತ್ತು ಕಸ್ತೂರಿ ಬಾ

ಸರ್ ಮಿರ್ಜಾ ಅವರು ಹೈದರಾಬಾದ್ ರೈಲು ನಿಲ್ದಾಣಕ್ಕೆ ಆಗಮನ



ನಿಜಾಮ ಮತ್ತು ಹೈದರಾಬಾದ್ ಸಚಿವ ಸಂಪುಟದೊಂದಿಗೆ ಸರ್ ಮಿರ್ಜಾ ಎಂ ಇಸ್ಮಾಯಿಲ್

